# ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಕಿರುಪ್ರಬಂಧ)

ಸಂಶೋಧಕರು

ರಾಜಶ್ರೀ ಬ. ಪಾಟೀಲ

ಮಾರ್ಗದರ್ಶಕರು

ಡಾ. ಎಫ್.ಟಿ. ಹಳ್ಳಿಕೇರಿ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ



ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯

# ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಕಿರುಪ್ರಬಂಧ)



ಸಂಶೋಧಕರು
ರಾಜಶ್ರೀ ಬ. ಪಾಟೀಲ

ಮಾರ್ಗದರ್ಶಕರು
ಡಾ. ಎಫ್.ಟಿ. ಹಳ್ಳಿಕೇರಿ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ





ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

## ಸಂಶೋಧಕರ ಪ್ರಮಾಣ ಪತ್ರ

ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಎಫ್.ಟಿ. ಹಳ್ಳಿಕೇರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 29/9/09

BPatil

(ರಾಜಶ್ರೀ ಬ. ಪಾಟೀಲ)
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

ರಾಜಶ್ರೀ ಬ. ಪಾಟೀಲ ಇವರು ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೧|೧|೦೧

(ಡಾ. ಎಫ್.ಟಿ. ಹಳ್ಳಿಕೇರಿ)
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಪ್ರವೇಶ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧.೧. ಪ್ರವೇಶ

ಸಮುದಾಯಗಳ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಆ ಸಮುದಾಯದ ಸಾಂಸ್ಕೃತಿಕ ವೀರರ ಅಧ್ಯಯನಗಳು ಮಹತ್ವದ ಸ್ಥಾನ ಪಡೆಯುತ್ತಿವೆ. ಸಾಂಸ್ಕೃತಿಕ ನಾಯಕರನ್ನು ಕುರಿತ ಚಾರಿತ್ರಿಕ ಕಥನಗಳನ್ನು ಆ ಸಮುದಾಯದ ಚಾರಿತ್ರಿಕ ಕಥನಗಳೆಂದೇ ಗ್ರಹಿಸಲಾಗುತ್ತಿದೆ. ಆ ಮುಖಾಂತರ ಸಮುದಾಯದ ಚರಿತ್ರೆಯನ್ನು ಕಟ್ಟಿಕೊಳ್ಳಲಾಗುತ್ತಿದೆ. ಇವುಗಳ ನಡುವೆ ವ್ಯಕ್ತಿಗತ ಸಾಂಸ್ಕೃತಿಕ ವೀರರನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡುವ ವಿಧಾನ ಆರಂಭವಾಗಿದೆ. ಈಗ ಸಮಷ್ಟಿ ಸಾಂಸ್ಕೃತಿಕ ವೀರರ ಅಧ್ಯಯನಗಳಿಗಿಂತ ವ್ಯಕ್ತಿಗತ ಸಾಂಸ್ಕೃತಿಕ ವೀರರ ಅಧ್ಯಯನಗಳು ವಿಸ್ತೃತ ರೂಪ ಪಡೆಯುತ್ತಿವೆ. ಒಬ್ಬೊಬ್ಬ ಸಾಂಸ್ಕೃತಿಕ ವೀರರನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸುವುದರ ಮುಖಾಂತರ ಆತ ಬದುಕಿದ ಕಾಲಘಟ್ಟದ ಸಮುದಾಯದ ಸ್ಥಿತಿಗತಿಯನ್ನು ಅರ್ಥೈಸಿಕೊಳ್ಳಲಾಗುತ್ತಿದೆ. "ಏಕೆಂದರೆ ಒಂದು ಸಮುದಾಯದಲ್ಲಿ ಅದರ ಸಾಕ್ಷಿ ಪ್ರಜ್ಞೆಯಂತೆ ಕಾಣಿಸಿಕೊಳ್ಳುವ ಒಬ್ಬ ನಾಯಕನ ಹುಟ್ಟು ಆ ಸಮುದಾಯದ ಒಳಗೆ ಒಂದು ವೈಚಾರಿಕ ಆವರಣವನ್ನು ಸೃಷ್ಟಿಸುತ್ತದೆ. ಆ ಮೂಲಕ ಅದು ಪ್ರಭುತ್ವವು ಹುಟ್ಟು ಹಾಕಿದ ಬೌದ್ಧಿಕ ಶೂನ್ಯತೆಯನ್ನು ಸ್ಫೋಟಿಸಲು ಯತ್ನಿಸುತ್ತದೆ. ಆ ವೈಚಾರಿಕ ಆವರಣವನ್ನು ಸೃಷ್ಟಿಸುವ ನಾಯಕ ಆ ಸಮುದಾಯದ ಒಟ್ಟು ಆಶೋತ್ತರಗಳ ಪ್ರತಿರೂಪ. ಅವನು ಇಡಿಯಾಗಿ ಆಯಾ ಸಮುದಾಯಗಳ ಕನಸುಗಳ ಜಗತ್ತಿನ ಬಲಿಷ್ಠ ಸಂಕೇತ. ಲೌಕಿಕ ಜಗತ್ತಿನ ಆಚೆಗೆ ಈ ಸಮುದಾಯಗಳು ತವಕಿಸುವ ಸ್ಮೃತಿ ಜಗತ್ತಿನ ಅಧಿಪತಿ. ಅವನು ಅಸಹಾಯಕ ಜೀವಗಳ ಒಟ್ಟು ಪ್ರತಿರೋಧ ಅಸಾಮಾನ್ಯ ವ್ಯಕ್ತಿತ್ವ. ಅದಕ್ಕಾಗಿಯೇ ಆಧೀನಗೊಂಡ ಎಲ್ಲ ಸಮುದಾಯಗಳ ಅಂತಃಸ್ಸತ್ವಗಳ ಪ್ರತಿರೂಪದಂತೆ ಈ ನಾಯಕರು ಗೋಚರಿಸುತ್ತಾರೆ. ನಮ್ಮ ಪರಂಪರೆಯ ಎಲ್ಲ ಬಗೆಯ ಸ್ಥಾವರ ಸಂಸ್ಥೆಗಳಿಗೆ ಪ್ರತಿದ್ವಂದ್ವಿಯಾಗಿ ನಿಲ್ಲಬಲ್ಲ ಅನುಭಾವಿ ನಾಯಕರಿವರು."[೧] ಇಲ್ಲಿ ಅಧ್ಯಯನಕ್ಕೆ ಒಳಪಡುವ 'ಶಾಂತಮುತ್ತಯ್ಯ' ಹಾಲುಮತ ಸಮುದಾಯದ ಆರಾಧ್ಯ ದೈವ. ಒಡೆಯರ ಕುಲದೈವ. ಈತನನ್ನು ಒಡೆಯರ ಮೂಲ ಪುರುಷನೆಂದೇ ಕರೆಯಲಾಗುತ್ತದೆ. ಶೈವ ಆರಾಧಕ. ಕುರಿಗಾರಿಕೆ ಮಾಡುತ್ತಿದ್ದ ವ್ಯಕ್ತಿ. ತಾಂತ್ರಿಕ ಪಂಥ(Cult)ದ ನಾಯಕ. ೧೨ನೇ ಶತಮಾನದಲ್ಲಿ ಕಲ್ಯಾಣದ ಪ್ರಭುತ್ವ ವ್ಯವಸ್ಥೆ 'ಕುರುಬ ಕುಲ'ಕ್ಕೆ ಅಥವಾ 'ಕುರಿಗಾರಿಕೆ ಸಂಸ್ಕೃತಿ'ಗೆ

ಅವಮಾನ ಮಾಡಿದಾಗ ತನ್ನ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕಾಗಿಯೇ ಹೋರಾಟ ಮಾಡಿದ ವ್ಯಕ್ತಿ ಈತ. ಕೊನೆಗೆ ತನ್ನ ವೃತ್ತಿ ಅಸ್ತಿತ್ವಕ್ಕಾಗಿ ತನ್ನ ಸಂಸ್ಕೃತಿಯನ್ನು 'ಲಿಂಗಾಯತ ಸಂಸ್ಕೃತಿ'ಗೆ 'ಸಂಸ್ಕೃತೀಕರಣ ಗೊಳಿಸಿದ. ಆದರೆ ಸಂಪೂರ್ಣವಾಗಿ ಲಿಂಗಾಯತನಾಗಲಿಲ್ಲ. ಬಸವಣ್ಣ, ರೇವಣಸಿದ್ಧ, ಬಿಜ್ಜಳ ಮತ್ತು ಇತರ ವಚನಕಾರರ ಸಮ್ಮುಖದಲ್ಲಿ ತನ್ನದೇ ಆದ 'ಪ್ರತಿಸಂಸ್ಕೃತಿ'ಯನ್ನು ಹುಟ್ಟು ಹಾಕಿದ. ಆ ಮುಖಾಂತರ ತನ್ನ ಪಾರಂಪರಿಕ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕೆ ಹಂಬಲಿಸಿದ. ಈತನ ಪ್ರತಿಸಂಸ್ಕೃತಿಯ ಪ್ರತಿನಿಧಿಗಳಾಗಿ 'ಶಾಂತ ಒಡೆಯರು' ಅಥವಾ 'ರೇವಣಸಿದ್ಧ ಒಡೆಯರು' ಸಿಗುತ್ತಾರೆ. ರೇವಣಸಿದ್ಧ ಮಠಗಳು, ಆಚರಣೆ-ಸಂಪ್ರದಾಯಗಳು, ಜನಪದ ಗೀತೆಗಳು, ಕಥನಗೀತೆಗಳು, 'ತಗರ ಜೋಗಿ'ಗಳು ಹಾಡುವ 'ತಗರ ಪವಾಡ', ಶಾಸನಗಳು, ಒಡೆಯರ ಹಕ್ಕುಪತ್ರಗಳು ಮತ್ತು ಲಿಖಿತ ಪುರಾಣಗಳು ಸಿಗುತ್ತವೆ. ಲಿಖಿತ ಪುರಾಣಗಳಲ್ಲಿ 'ತಗರ ಪವಾಡ' ಮತ್ತು 'ಸಿದ್ಧಮಂಕ ಚರಿತೆ' ಕೃತಿಗಳು ಪ್ರಮುಖವಾಗಿ ಕಂಡು ಬರುತ್ತವೆ. ಈ ಎಲ್ಲಾ ಆಧಾರಗಳನ್ನು ಇಟ್ಟುಕೊಂಡು ಶಾಂತಮುತ್ತಯ್ಯನನ್ನು ಅಧ್ಯಯನಕ್ಕೆ ಒಳಪಡಿಸಿರುವುದು ತುಂಬಾ ಕಡಿಮೆ. ಜೊತೆಗೆ ೧೨ನೇ ಶತಮಾನದ ಹಾಲುಮತಸ್ಥರ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಸಂದರ್ಭಗಳನ್ನು ಕುರಿತು ಅಧ್ಯಯನಗಳಾಗಿರುವುದು ಕಡಿಮೆ. ಇದು ಅಲ್ಲದೆ ಈಗ ಶಾಂತ ಒಡೆಯರ ಸಂಸ್ಕೃತಿಯಲ್ಲಿ ಆಗಿರುವ ರೂಪಾಂತರಗಳನ್ನು ಗುರುತಿಸಿಲ್ಲ. ಇವುಗಳನ್ನು ಗುರುತಿಸುವುದರ ಮುಖಾಂತರ ಶಾಂತಮುತ್ತಯ್ಯನ ಸಂಸ್ಕೃತಿಯಲ್ಲಿ ಆಗಿರುವ ಬದಲಾವಣೆಗಳನ್ನು ಮತ್ತು ಹಾಲುಮತ ಸಂಸ್ಕೃತಿಯಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸಬಹುದು. ಪ್ರಸ್ತುತ ಅಧ್ಯಯನವು ಈ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಒಳಗಾಗಿದೆ.

ಕರ್ನಾಟಕವು ಅನೇಕ ಜನ ಸಮುದಾಯಗಳನ್ನು ಹೊಂದಿದ ನಾಡು. ಯಾವುದೇ ಜನಸಮುದಾಯಕ್ಕೆ ಅದರದ್ದೇ ಆದ ಸಾಂಸ್ಕೃತಿಕ ಹಿನ್ನೆಲೆ ಇರುತ್ತದೆ. ವಿಶೇಷವಾಗಿ ಧಾರ್ಮಿಕ, ಸಾಂಸ್ಕೃತಿಕ ಹಿನ್ನೆಲೆಗಳು ಪರಂಪರಾಗತವಾಗಿ ಆ ಜನಸಮುದಾಯದ ಸ್ವರೂಪವನ್ನು ರೂಪಿಸುತ್ತವೆ. ಇಂತಹ ಸ್ವರೂಪಗಳು ಕಾಲ ದಿಂದ ಕಾಲಕ್ಕೆ ಬದಲಾಗಬಹುದು ಇಲ್ಲವೆ ಯಾವ ಬದಲಾವಣೆಗಳಿಲ್ಲದೆ ಮುಂದುವರೆಯಬಹುದು. ಜನಾಂಗವೊಂದಕ್ಕೆ ಇಂತಹ ಧಾರ್ಮಿಕ ಸಾಂಸ್ಕೃತಿಕ ಸ್ವರೂಪವನ್ನು ರೂಪಿಸಲು ಶ್ರಮಿಸಿದ ಹಿರಿಯ ತಲೆಮಾರುಗಳ ಸಾಧನೆಯ ಇತಿಹಾಸ ಮಾತ್ರ ಎಂದೂ, ಯಾವ ಕಾಲಕ್ಕೂ ಬದಲಾಗದೆ ಉಳಿಯು ವಂಥಹದು. ಜನಾಂಗ ಸಂಸ್ಕೃತಿಯ ಸ್ವರೂಪದ ನಿರ್ಮಾಣಕಾರರ ಬಗೆಗೆ ತಿಳಿದುಕೊಳ್ಳುವುದೆಂದರೆ ಒಂದು ಜನಾಂಗದ ತಳಹದಿಯನ್ನು ತಿಳಿದುಕೊಳ್ಳುವುದೆಂಬ ವಿಶಾಲ ಅರ್ಥವ್ಯಾಪ್ತಿಯನ್ನು ಪಡೆಯುತ್ತದೆ.

### ೧.೨. ಅಧ್ಯಯನದ ಉದ್ದೇಶ

ಕುರುಬರ ಗುರುಪರಂಪರೆಯಲ್ಲಿ ಶಾಂತಮುತ್ತಯ್ಯನಿಗೆ ಅಗ್ರಸ್ಥಾನ. ಈತನ ಕಾರ್ಯಕ್ಷೇತ್ರ ಸರೂರು. ಈ ಕಾರಣಕ್ಕಾಗಿ "ಸರೂರು ಶಾಂತಮುತ್ತಯ್ಯ"ನೆಂದೇ ಈತ ಪ್ರಸಿದ್ಧಿ ಹೊಂದಿದ್ದಾನೆ. ಕಲ್ಯಾಣ ಪಟ್ಟಣದಿಂದ ಹೊರಹಾಕಿದ ಕುರುಬರನ್ನು, ತನ್ನ ವ್ಯಕ್ತಿತ್ವ ಮತ್ತು ಸಾಧನೆಯಿಂದ ಮತ್ತೆ ಕಲ್ಯಾಣದೊಳಗೆ ಪ್ರವೇಶ ಸಿಗುವಂತೆ ಮಾಡಿದ ವ್ಯಕ್ತಿ.

'ತಗರ ಪವಾಡ' ಕೃತಿಯು ಈತನ ಸಮಗ್ರ ಚರಿತ್ರೆಯನ್ನು ನಿರೂಪಿಸುವ ಕೃತಿ. ಹಾಗೆಯೇ ಶಾಸನ ಹಾಗೂ ಇತರೆ ಕಾವ್ಯ ಪುರಾಣಗಳಲ್ಲಿ ಶಾಂತಮುತ್ತಯ್ಯನ ಕಥೆ ಅಲ್ಲಲ್ಲಿ ಪ್ರಸ್ತಾಪಗೊಂಡಿದೆ. ಮೇಲಾಗಿ ನಾಟಕ ರೂಪದಲ್ಲಿಯೂ ಈತನ ವ್ಯಕ್ತಿತ್ವ ಮತ್ತು ಸಾಧನೆಯನ್ನು ಹಿಡಿದಿಡುವ ಪ್ರಯತ್ನ ನಡೆದಿದೆ. 'ಶಾಂತ ವಿಜಯ' ಹೆಸರಿನ ನಾಟಕವನ್ನು ತುಮಕೂರು, ಚಿಕ್ಕಮಗಳೂರು, ಹಾಸನ ಪ್ರದೇಶಗಳಲ್ಲಿ ಪ್ರದರ್ಶಿಸಲಾಗುತ್ತದೆ. ಈ ಎಲ್ಲಾ ಆಕರಗಳನ್ನಿಟ್ಟುಕೊಂಡು ಸರೂರು ಶಾಂತಮುತ್ತಯ್ಯನನ್ನು ಕೇವಲ ವ್ಯಕ್ತಿಗತ ಅಧ್ಯಯನ ಮಾತ್ರ ಆಗಿರದೆ ಒಂದು ಜನಾಂಗವನ್ನು ರೂಪಿಸುವಲ್ಲಿನ, ಅವರ ಸಾಧನೆಗಳನ್ನು ಕುರಿತು ಮುಂದಿನ ತಲೆಮಾರುಗಳು ಪವಾಡ ಕತೆಗಳನ್ನು (ಸಾಹಿತ್ಯಕವಾದ) ಕಾವ್ಯಗಳನ್ನು ರಚಿಸಿರುವುದು ಅವರ ಹಿರಿಮೆಯನ್ನು ಸೂಚಿಸುತ್ತದೆ. ಸರೂರು ಶಾಂತಮುತ್ತಯ್ಯನವರನ್ನು ಕುರಿತು ಬಂದ 'ತಗರ ಪವಾಡ' ಮತ್ತು ಇತರ ಸಾಹಿತ್ಯಿಕವಾಗಿ ಅಲ್ಲಲ್ಲಿ ದೊರೆತ ಉಲ್ಲೇಖಗಳು ಇವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿವೆ. ಇಂತಹ ಹಲವಾರು ಜನಾಂಗಗಳು ತಮ್ಮದೇ ಆದ ಮೂಲವನ್ನು ಕುರಿತು ಪವಾಡ ರೂಪದ ಕೃತಿಗಳು, ಮಹಾಕಾವ್ಯಗಳು ರಚನೆಗೊಂಡಿರುವ ಬಗ್ಗೆ ತಿಳಿದು ಬರುತ್ತದೆ. ರಾಜಾಶ್ರಯದಲ್ಲಿ ಪ್ರಭುತ್ವ ಧರ್ಮವು ರೂಪಿಸಿಕೊಂಡ ಸಾಂಸ್ಕೃತಿಕ ಚಹರೆಗಳು ಇಂದಿಗೂ ದಾಖಲಾತ್ಮಕ ಅಧ್ಯಯನಕ್ಕೆ ಆಕರಗಳಾಗಿರುವಂಥವುಗಳು. ಆದರೆ ಕುರುಬ ಜನಾಂಗದ ನಿರ್ಮಾತೃಗಳು ಇಂತಹ ರಾಜಾಶ್ರಯದ ಬಂಧನಗಳನ್ನು ತೊರೆದವರು. ಯಾವ ರಾಜಾಶ್ರಯದ ಹಂಗಿಲ್ಲದೆ ರೂಪುಗೊಂಡ ಇಂತಹ ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕೆ ಒಂದು ವಿಶಿಷ್ಟತೆಯಿದೆ. ಸಮೂಹದಲ್ಲಿ ಕೇವಲ ಒಂದು ಸಣ್ಣ ಜನಾಂಗವಾಗಿ ಎಲ್ಲೂ ಮುನ್ನೆಲೆಗೆ ಬರದೆ ಉಳಿದಿದ್ದ ಕಾಲವನ್ನು ಅನುಭವಿಸಿದೆ. ಇಂತಹ ಅಸ್ಮಿತೆಗಳಿಲ್ಲದೆ ಬಳಲಿದ ಜನಾಂಗಗಳಲ್ಲಿ ಕುರುಬ ಜನಾಂಗದ ಸಂಸ್ಕೃತಿ, ಸಾಹಿತ್ಯ ಅದಕ್ಕೆ ಸಂಬಂಧಿಸಿದ ಪವಾಡ ಪುರುಷರ ಕುರಿತ ಅಧ್ಯಯನ ವಿಶಿಷ್ಟವಾಗಿರುವಂತಹದ್ದು. ಕಾಲದಿಂದ ಕಾಲಕ್ಕೆ ಪ್ರವರ್ಧಮಾನಕ್ಕೆ ಬಂದ ಈ ಜನಾಂಗದ ಸಾಂಸ್ಕೃತಿಕ ಅನನ್ಯತೆ ಮತ್ತು ಸ್ಥಿತ್ಯಂತರಗೊಂಡಿರುವ ಅದರ ಇಂದಿನ ಚಹರೆಗಳ ಸ್ಪಷ್ಟ ರೂಪ ದರ್ಶನಕ್ಕೆ ನಾಂದಿಯಾಗುತ್ತದೆ.

ಜನಾಂಗವೊಂದನ್ನು ಮುನ್ನೆಲೆಗೆ ತರುವ ಹಿನ್ನೆಲೆಯಲ್ಲಿ ನಡೆದ ಎಷ್ಟೋ ಪ್ರಯತ್ನಗಳಲ್ಲಿ ಕಥೆ, ಮಹಾಕಾವ್ಯ ಪವಾಡ ಕತೆಗಳು ರೂಪುಗೊಂಡಿವೆ. ಸಮಾಜದಲ್ಲಿ ತಮ್ಮದೇ ಆದ ಅಸ್ತಿತ್ವವನ್ನು ರೂಪಿಸಿ ಕೊಳ್ಳುವ, ಜನಾಂಗಿಕವಾದ ಅಂತಃಸತ್ವವನ್ನು ತಿಳಿಸುವ ಪ್ರಯತ್ನದಲ್ಲಿ ಇವು ಸಫಲವಾಗಿವೆ. ಕುರುಬ ಜನಾಂಗದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕಂಡು ಬರುವ ಗುರುಗಳನ್ನು 'ಒಡೆಯರು' ಎಂದು ಕರೆಯುತ್ತಾರೆ. ಇವರಲ್ಲಿ ಸರೂರು ಶಾಂತಮುತ್ತಯ್ಯನವರು ಆದ್ಯರು. ಇವರನ್ನು ಕುರಿತಾದ ಅಧ್ಯಯನವೆಂದರೆ ಕುರುಬರ ಗುರು ಪರಂಪರೆಯ ಅಧ್ಯಯನವೇ ಆಗಿದೆ. ಇದರ ಕುರಿತು ಸಮಗ್ರವಾದ ಅಧ್ಯಯನ ನಡೆದಿಲ್ಲ. ಈ ಸಂಗತಿಯನ್ನು ಗಮನಿಸಿ "ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ" ಎಂಬ ವಿಷಯವನ್ನು ನನ್ನ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದೇನೆ.

## ೧.೬. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಪ್ರಬಂಧವನ್ನು ಅಧ್ಯಯನದ ದೃಷ್ಟಿಯಿಂದ ಐದು ಅಧ್ಯಾಯಗಳನ್ನಾಗಿ ವಿಂಗಡಿಸಿ ಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯಲ್ಲಿ ಶಾಂತಮುತ್ತಯ್ಯನ ಇತಿವೃತ್ತ ವಿಚಾರ, ಹಿನ್ನೆಲೆ, ಕಾಲ, ಸ್ಥಳ, ತಂದೆ-ತಾಯಿ, ಲಿಂಗದೀಕ್ಷೆ, ಗುರು ಪಂರಪರೆ, ನೆಲೆಗಳು, ಸರೂರು, ಬಸವಕಲ್ಯಾಣ, ಶಿರವಾಳ ಕುರಿತು ಚರ್ಚಿಸ ಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಶಾಂತಮುತ್ತಯ್ಯನನ್ನು ಕುರಿತು ರಚನೆಗೊಂಡ 'ತಗರ ಪವಾಡ' ರಸ್ತಾಪುರ ಭೀಮಕವಿಯ 'ಹಾಲುಮತೋತ್ತೇಜಕ ಪುರಾಣ', ಚನ್ನಬಸವ ಕವಿಯ 'ಹಾಲುಮತ ಪುರಾಣ', 'ಶ್ರೀಗುರು ಶಾಂತವಿಜಯ' ಪೌರಾಣಿಕ ನಾಟಕ, ಶಾಸನಗಳು, ಶಿರವಾಳ ಶಾಸನ, ತುರುವೇಕೆರೆ ತಾಮ್ರಶಾಸನ ಗಳನ್ನು ಮತ್ತು ಇತರ ಆಕರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮದುವೆ, ಶವಸಂಸ್ಕಾರ ಆಚರಣೆಗಳು, ಉತ್ಸವಗಳು, ಕಂಥಾಧಾರಣ ಸೇವೆ, ಒಡೆಯರ ಹೇಳಿಕೆಗಳು ಸರೂರು ಜಾತ್ರೆಯಲ್ಲಿ ನಡೆಯುವ ಶಾಂತಮುತ್ತಯ್ಯನ ಆಚರಣೆಗಳ ವಿವರಗಳ ಬಗ್ಗೆ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ಗುರುತಿಸಲಾಗಿದೆ.

ಅನುಬಂಧದಲ್ಲಿ ಶಾಸನಪಠ್ಯ, ಛಾಯಾಚಿತ್ರ ಹಾಗೂ ಸಹಾಯಕ ಗ್ರಂಥಗಳ ಮಾಹಿತಿಯನ್ನು ನೀಡಲಾಗಿದೆ.

**ಟಿಪ್ಪಣಿ**

೧. ಪ್ರಭಾಕರ ಎ.ಎಸ್., **ಮ್ಯಾಸಬೇಡರ ಕಥನಗಳು,** ಪು. ೫.

• • •

# ಅಧ್ಯಾಯ ಎರಡು

# ಶಾಂತಮುತ್ತಯ್ಯನ ಇತಿವೃತ್ತ ವಿಚಾರ

---

# ಅಧ್ಯಾಯ ಎರಡು

# ಶಾಂತಮುತ್ತಯ್ಯನ ಇತಿವೃತ್ತ ವಿಚಾರ

## ೨.೧. ಹಿನ್ನೆಲೆ

ಕರ್ನಾಟಕದ ಬಹುಸಂಖ್ಯಾತ ಸಮುದಾಯಗಳಲ್ಲಿ ಕುರುಬ ಸಮಾಜವೂ ಒಂದು. ಪ್ರಾಚೀನ ಇತಿಹಾಸವನ್ನು ಹೊಂದಿರುವ ಈ ಸಮಾಜದ ಗುರು ಪರಂಪರೆಯಲ್ಲಿ ಶಾಂತಮುತ್ತಯ್ಯನಿಗೆ ಅಗ್ರಸ್ಥಾನವಿದೆ. ಈ ಪರಂಪರೆಯಲ್ಲಿ ಬರುವ ಶಾಂತ ಒಡೆಯರ ಸಂಪ್ರದಾಯವು ಕರ್ನಾಟಕದಾದ್ಯಂತ ಕಂಡು ಬರುತ್ತದೆ. ವಿಶೇಷವಾಗಿ ರೇವಣಸಿದ್ಧೇಶ್ವರ ಮಠದ ಗುರುಗಳಾಗಿ, ಪೂಜಾರಿಗಳಾಗಿ ಕಾರ್ಯನಿರ್ವಹಿಸುವ ಇವರು ಶಾಂತಮುತ್ತಯ್ಯನನ್ನು ತುಂಬ ಭಕ್ತಿ ಗೌರವದಿಂದ ಸ್ಮರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಶಾಂತಮುತ್ತಯ್ಯನ ಇತಿವೃತ್ತ ವಿಚಾರಗಳನ್ನು ತಿಳಿಯುವ ಪ್ರಯತ್ನ ಈ ಅಧ್ಯಾಯದಲ್ಲಿ ಮಾಡಲಾಗುತ್ತಿದೆ.

'ತಗರ ಪವಾಡ' ಶಾಂತಮುತ್ತಯ್ಯನ ಜೀವನ ಚರಿತ್ರೆಯನ್ನು ತಿಳಿಸುವ ಬಹುಮುಖ್ಯ ಕೃತಿ. ಹೀಗಾಗಿ ಈ ಕೃತಿಯನ್ನು ಮುಖ್ಯವಾಗಿಟ್ಟುಕೊಂಡು ಪೂರಕವಾಗಿ ಇತರೆ ಪುರಾಣ, ಕಾವ್ಯಗಳು, ಶಾಸನಗಳು ಹಾಗೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಗಳ ಹಿನ್ನೆಲೆಯಲ್ಲಿ ಶಾಂತಮುತ್ತಯ್ಯನ ಜೀವನ ವೃತ್ತಾಂತವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

## ೨.೨. ಕಾಲ

ಮೊದಲು ಶಾಂತಮುತ್ತಯ್ಯನವರು ಜೀವಿಸಿರುವ ಕಾಲ ಯಾವುದು ಎಂಬುದನ್ನು ಬಿಡಿಸಿಕೊಳ್ಳಬೇಕಾಗುತ್ತದೆ. 'ತಗರ ಪವಾಡ' ಕೃತಿಯು ಶಾಂತಮುತ್ತಯ್ಯ ಕಲ್ಯಾಣದ ಬಸವಾದಿ ಶರಣರ ಸಮ್ಮುಖದಲ್ಲಿ ಸತ್ತಿರುವ ತಗರನ್ನು ಬದುಕಿಸಿ ಪವಾಡ ಮೆರೆದು ಬಸವಣ್ಣ ಬಿಜ್ಜಳರಿಂದ ಗೌರವವನ್ನು ಸ್ವೀಕರಿಸಿದ ಸಂಗತಿಯನ್ನು ಹೇಳುತ್ತದೆ. ಹೀಗಾಗಿ ಶಾಂತಮುತ್ತಯ್ಯನವರು ಜೀವಿಸಿದ ಕಾಲವು ಬಸವಾದಿ ಪ್ರಥಮರು ಜೀವಿಸಿರುವ ಕಾಲವೇ ಆಗಿದೆ ಎಂದು ಹೇಳಬಹುದು. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ತಾಳಿಕಟ್ಟೆ ಶಾಸನವೂ ಕೂಡ ಈ ವಿಚಾರವನ್ನು ಸಮರ್ಥಿಸುತ್ತದೆ.

"ಶ್ರೀ ಗುಣಾಧಿಪತಯುಂ ನಮಃ ಸರಾಉರಾ ರೇವಣಾ
ಸಿದ್ದೇಶವಾರನಾಶಿಯ ಶಾಂತಮುತ್ತೆಯಿನು ಇರುವಾ
ಕೂದಲು ನವ ಒಕುವಾಡದ ಶಿಮೆಯಬೆಳಾಗಳ
ಊರು ತಾಳಿಕೋಟೆಯ ಕುರುಬಾ ಗೌಡರು ಕಲ್ಯಾಣದ

ವಿಜಾಣರಯನ ಮೈದುನ........ಳಾರಯನ ಮಗನು
ಗೋಮರಯನ ನವವಕುಬಡವ ಕಲದಲು''[೧]

ಈ ಶಾಸನವು ಬಿಜ್ಜಳರಾಯನು ಆಳುವ ಕಾಲದಲ್ಲಿ ಸರವೂರ ರೇವಣಸಿದ್ಧ ಮತ್ತು ಶಾಂತಮುತ್ತಯ್ಯನವರು ಬದುಕಿದ್ದರು ಎಂದು ಹೇಳುವುದರಿಂದ ಶಾಂತಮುತ್ತಯ್ಯನು ಬಸವಣ್ಣನವರ ಸಮಕಾಲೀನವಾದ ವ್ಯಕ್ತಿ ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೆ ಇದರಿಂದ ಶಾಂತಮುತ್ತಯ್ಯನವರು ೧೧ನೆಯ ಶತಮಾನದ ಕೊನೆಯ ಭಾಗದಲ್ಲಿ ಜನಿಸಿ ೧೨ನೆಯ ಶತಮಾನದ ಎಪ್ಪತ್ತರ ದಶಕದವರೆಗೆ ಬಾಳಿರಬಹುದು ಎಂದು ಸ್ಥೂಲವಾಗಿ ಹೇಳಬಹುದಾಗಿದೆ.

### ೨.೩. ಸ್ಥಳ

ಶಾಂತಮುತ್ತಯ್ಯನ ಊರು ಸರವೂರು. ಇದು ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ದಲ್ಲಿದೆ. ತಾಲೂಕು ಕೇಂದ್ರವಾದ ಮುದ್ದೇಬಿಹಾಳದಿಂದ ಪಶ್ಚಿಮಕ್ಕೆ ಹನ್ನೆರಡು ಕಿಲೋಮೀಟರ್ ಅಂತರ ದಲ್ಲಿ ಇರುವ ಈ ಊರಿನಲ್ಲಿ ನೂರಕ್ಕೆ ೮೦ರಷ್ಟು ಕುರುಬ ಜನಾಂಗದವರೇ ಇದ್ದಾರೆ. ಊರ ಹೊರಗೆ ಬಯಲಿನಲ್ಲಿ ಒಂದು ಗುದ್ದುಗೆಯಿದ್ದು ಅದನ್ನು 'ಶಾಂತಮುತ್ತಯ್ಯನ ಗದ್ದುಗೆ'ಯೆಂದು ಕರೆಯುತ್ತಾರೆ. ಗದ್ದುಗೆಯ ಮಗ್ಗುಲಲ್ಲಿಯೇ ಪಂಚಕೂಟ ದೇವಾಲಯವಿದೆ. ಇದನ್ನು ರೇವಣಸಿದ್ಧ ದೇವಾಲಯವೆಂದೂ ಏಳುಗುಡಿ ಎಂದೂ ಕರೆಯುತ್ತಾರೆ.[೨] ಈ ದೇವಾಲಯದ ನಿಜವಾದ ಹೆಸರು 'ಮಲ್ಲಿಕಾರ್ಜುನ' ಈ ಗದ್ದುಗೆ ಮತ್ತು ದೇವಾಲಯದ ಅರ್ಚಕರು ಕುರುಬರು ಆಗಿದ್ದಾರೆ. ಅರ್ಚಕರಾದ ಒಡೆಯರು ಈ ದೇವಾಲಯ ಮತ್ತು ಗುದ್ದುಗೆಯ ಪೂಜೆಯನ್ನು ಮಾಡಿಕೊಂಡು ಬಂದಿರುವ ಪೂಜಾರಿಗಳು ಶಾಂತ ಮುತ್ತಯ್ಯನವರ ವಂಶಸ್ಥರು ಆಗಿದ್ದಾರೆ. ಅವರು ಅನೇಕ ಪವಾಡಗಳಲ್ಲಿ ಮೆರೆದು ಸಮಾಧಿಯೊಳಗಿರುವುದು ಇಲ್ಲಿಯೇ ಎಂದು ಅಲ್ಲಿರುವ ಪೂಜಾರಿಗಳು ಹೇಳುತ್ತಾರೆ. ಜೊತೆಗೆ ಪರಂಪರಾಗತವಾಗಿ ಇವರು ಕುರುಬರ ಕುಲಗುರುಗಳಾಗಿ ಕಾರ್ಯವನ್ನು ನಿರ್ವಹಿಸುತ್ತಾ ಬಂದಿರುವ ಇದಕ್ಕೆ ಅವರ ಬಳಿಯಲ್ಲಿ ಇರುವ ಸನದುಗಳು ಹಾಗೂ ಕಾಗದ ಪತ್ರಗಳು ಸಾಕ್ಷಿಯಾಗಿವೆ. ಏಕೆಂದರೆ ಈ ಹೆಸರಿನ ಊರು ಬೇರೆ ಎಲ್ಲಿಯೂ ಇಲ್ಲದಿರುವು ದರಿಂದ ಮತ್ತು ಈ ಊರಿನಲ್ಲಿ ಇರುವ ದೇವಾಲಯಗಳು ಸ್ಮಾರಕಗಳು, ಸ್ಥಳಪುರಾಣ ಮತ್ತು ಐತಿಹ್ಯಗಳು ಇದನ್ನು ಸಮರ್ಥಿಸುವುದರಿಂದ ಶಾಂತಮುತ್ತಯ್ಯನವರ ಸರೂರು ಇದೇ ಎಂಬುದರಲ್ಲಿ ಯಾವುದೇ ಸಂದೇಹ ಉಳಿಯಲಾರದು.

೧. ಸರೂರು ಎಂಬ ಸ್ಥಳನಾಮ ಹೇಗೆ ಬಂತು ಎಂಬುದಕ್ಕೆ ಈ ಕೆಳಗಿನ ಆಕರಗಳನ್ನು ಉಲ್ಲೇಖಿಸಬಹುದು.

ಶಾಂತಮುತ್ತಯ್ಯನವರ ಭಕ್ತಿಗೆ ಶಿವನೊಲಿದು ಸರ್ವೇಶ್ವರ ಲಿಂಗಕ್ಕೆ ಹೂವಿನ ಸರವನ್ನು ಕೈಲಾಸ ದಿಂದ ಏಕಾಕಾರವಾಗಿ ಬಿಟ್ಟರು. ಶಿವನು ಹೂವಿನ ಸರವನ್ನು ಬಿಟ್ಟಿದ್ದಕ್ಕಾಗಿ ಕಲ್ಲಿನಕೆರೆಗೆ ಹೊಸದಾಗಿ ಸರೂರ ಎಂಬುದು ನಾಮಕರಣವಾಯಿತು. ಹಾಲುಮತ ಮೂಲ ಗುರುಪೀಠವಾಗಿ ಈಗಲೂ ಸರೂರ ಎಂದು ಪ್ರಸಿದ್ಧವಾಗಿದೆ.[೩]

೨. ತಂದೆ ಪದುಮಣ್ಣನಿಂದ ಬೇರೆಯಾಗಿ, ಹೆಂಡತಿಯೊಂದಿಗೆ ಕುರಿಹಿಂಡು ಸಹಿತ ಹೊರಟ ಶಾಂತಯ್ಯನಿಗೆ ಭಕ್ತಿ ಕಾಣಿಕೆಯಾಗಿ "ಚಕೋರಿ ಹೊಳೆಯ" ತೀರದಲ್ಲಿ ದೇವಾಲಯ ನಿರ್ಮಿಸಲಾಯಿತೆಂದೂ, ಇಲ್ಲಿ ಶಿವನಿಂದ ಶಾಂತಯ್ಯನಿಗೆ ದೀಕ್ಷೆ ಪ್ರಾಪ್ತವಾಯಿತೆಂದೂ, ಆಗ ದೇವಲೋಕದಿಂದ ಸುರಿದ "ಕರಿಯ ಮಲ್ಲಿಗೆಯಿಂದಾಗಿ" ಸರೂರು ಎಂಬ ಗ್ರಾಮ ನಿರ್ಮಾಣವಾಯಿತೆಂದೂ ಹೇಳಲಾಗಿದೆ.

೩. ತಂದೆಯಿಂದ ಬೇರ್ಪಟ್ಟು ಶಿವಪೂಜೆ, ಶಿವಧ್ಯಾನದಲ್ಲಿದ್ದ ಶಾಂತಯ್ಯ ಜಂಗಮ ವೇಷದಲ್ಲಿ ಬಂದ ಶಿವನಿಗೆ ಅಗಣಿತ ಜಂಗಮ ಪರಿವಾರಕ್ಕೆ "ಒಂದು ಕರಗ ಅಂಬಲಿ(೩:೫೫)ಯಿಂದ ತೃಪ್ತಿಪಡಿಸುತ್ತಾನೆ ಮತ್ತು ಚಕೋರಿ ಹೊಳೆಯ ತೀರದ(ಸರೂರಿನ)ಲ್ಲಿ ಶಿವ(ರೇವಣಸಿದ್ಧ)ನಿಗಾಗಿ ದೇವಾಲಯ ನಿರ್ಮಾಣ ವಾಗಲು ಕಾರಣಿಭೂತನಾಗುತ್ತಾನೆ. ಇದರಿಂದ ಸುಪ್ರೀತನಾದ ಜಂಗಮ ರೂಪಿ ಶಿವನಿಗೆ ನನ್ನನ್ನು "ಕರಜಾತನನ ಮಾಡು" (೩:೬೭) ಎಂದು ಬೇಡಿಕೊಳ್ಳುತ್ತಾನೆ. ಆಗ ಶಿವನು ಪಂಡಿತಾರಾಧ್ಯ, ರೇವಣಾರಾಧ್ಯ, ಏಕೋರಾಮಾರಾಧ್ಯ, ಮರುಳಾರಾಧ್ಯ - ಹೀಗೆ ನಾಲ್ಕು ಕಲಶಪೂರ್ವಕ ಮಧ್ಯದಲ್ಲಿ ಗುರುಕಲಶ ಹೂಡಿ (ಇದೆಲ್ಲ ಕವಿಯ ಕಾಲವಾಗಿರುವ ೧೭ನೇಯ ಶತಮಾನದ ಕಲ್ಪನೆ) ದೀಕ್ಷೆ ಆರಂಭಿಸುತ್ತಾನೆ. ಈ ಸಂದರ್ಭದಲ್ಲಿ ಸುರಿದ ಕರಿಯ ಮಲ್ಲಿಗೆಯಿಂದಾಗಿ ಆ ಸ್ಥಳಕ್ಕೆ ಸರವೂರು ಹೆಸರು ಪ್ರಾಪ್ತವಾಯಿತು.

**೨.೪. ತಂದೆ - ತಾಯಿ**

ಕೊಲ್ಲಾಪುರದ ಮಾಯೆ ಎಂಬ ಹೆಸರಿನ ವೇಶ್ಯೆಗೆ ಮನಸೋತು 'ನವಕೋಟಿಸಿದ್ಧ'ರು ಅವಳ ದಾಸರಾಗಿ ದುಡಿಯುತ್ತಿದ್ದರು. ನಾರದನಿಂದ ಇದನ್ನು ತಿಳಿದ ಶಿವನು ವಿಟನಾಗಿ ಬಂದು ಆ ವೇಶ್ಯೆಯನ್ನು ಜಯಿಸಿ ನವಕೋಟಿ ಸಿದ್ಧರಿಗೆ ಕುರಿಗಳಾಗಲು ಶಪಿಸಿ, ಅವುಗಳನ್ನು ಕಾಯುತ್ತ 'ತೊಗರ್ಸಿ' ಗ್ರಾಮಕ್ಕೆ ಬಂದು ಅಲ್ಲಿಯ ಒಕ್ಕಲಿಗ 'ಆದಿಗೊಂಡ'ನ ಹೆಂಡತಿ 'ಮಲ್ಲಮ್ಮ' ಎನ್ನುವವರ ಹೊಲದ ಹುತ್ತಿನಲ್ಲಿ ಕುರಿಗಳನ್ನು ಹೊಗಿಸಿ ತಾನು ಕೈಲಾಸಕ್ಕೆ ಮರಳುತ್ತಾನೆ. 'ಆದಿಗೊಂಡ'ನ ೭ ಜನ ಮಕ್ಕಳಲ್ಲಿ ಕಿರಿಯವನಾದ ಪದ್ಮಗೊಂಡನು ತಮ್ಮ ಹೊಲದಲ್ಲಿಯ ಹುತ್ತವನ್ನು ಒಡೆಯಲಾಗಿ ಹೊರಬಂದ ಕುರಿಗಳನ್ನು ನೋಡಿ ಆಶ್ಚರ್ಯಪಡುತ್ತಾನೆ. ಶಿವನಿಂದ ಕಳಿಸಲ್ಪಟ್ಟ 'ಬೀರಯ್ಯ'ನೆಂಬುವನನ್ನು ಇವನಿಗೆ ಕುರಿಕಾಯುವ ಕೆಲಸದಲ್ಲಿ ನೆರವಾಗುತ್ತಾನೆ. ಇವರು ದೂರದ ಪ್ರದೇಶಗಳಿಗೆ ಪ್ರಯಾಣಿಸುವಲ್ಲಿ ಮೇಯುತ್ತಿದ್ದ ಕುರಿಗಳನ್ನು ತಿನ್ನಲು ಬಂದ 'ಬಕಾಸುರ'ನನ್ನು ಬೀರಯ್ಯ ಕೊಲ್ಲುತ್ತಾನೆ. ಪದ್ಮಗೊಂಡ ಅನಾಥೆಯಾದ ರಾಕ್ಷಸಿಯ ಮಗಳಾದ ಸಿರಿವಂತೆ ಎಂಬುವವಳೊಂದಿಗೆ ಮದುವೆಯಾಗುತ್ತಾನೆ. ನಂತರ ಲಿಂಗಮ್ಮ ಎಂಬುವವಳೊಂದಿಗೆ ಮದುವೆ ಯಾಗುತ್ತದೆ. ಅವರಿಗೆ ಶಾಂತಮುತ್ತಯ್ಯನೆಂಬ ಮಗನು ಹುಟ್ಟಿರುತ್ತಾನೆ. ಶಾಂತಮುತ್ತಯ್ಯನ ತಂದೆ - ಪದ್ಮಗೊಂಡ ತಾಯಿ - ಲಿಂಗಮ್ಮ ಅವರು ತೊಗರ್ಸಿಯಲ್ಲಿಯೇ ಉಳಿದಿರುತ್ತಾರೆ. ಹೀಗೆ ಸಿರಿವಂತೆಯನ್ನು ಮದುವೆಯಾಗಿ ಅವಳೊಂದಿಗೆ ಕುರಿ ಕಾಯುತ್ತ ದೂರ ದೂರ ಹೋಗಿ ಬಿಡುತ್ತಾನೆ.

ಇತ್ತ ತಾಯಿ ಮಲ್ಲಮ್ಮ ತೊಗರ್ಸಿಯಲ್ಲಿ ಪದ್ಮಗೊಂಡ ಲಿಂಗಮ್ಮರ ಮಗ ತನ್ನ ಮೊಮ್ಮಗ ಶಾಂತಯ್ಯನಿಗೆ ದೇವಮ್ಮನೊಂದಿಗೆ ಮದುವೆ ಮಾಡುತ್ತಾಳೆ. ಅನೇಕ ವರ್ಷಗಳ ಬಳಿಕ ವೃದ್ಧ ಪದ್ಮಗೊಂಡ

ಸಿರವಂತೆಯೊಂದಿಗೆ ಕುರಿ ಹಿಂಡು ಕಾಯುತ್ತ ತೊಗರ್ಸಿ ಗ್ರಾಮಕ್ಕೆ ಮರಳುತ್ತಾನೆ. ಒಂದು ರಾತ್ರಿ ಅಲ್ಲಿ ಉಳಿದು ಎಲ್ಲ ಆಸ್ತಿಯನ್ನು ತಮ್ಮ ಬಂಧುಗಳಿಗೆ ಬಿಟ್ಟು ಹೆಂಡತಿಯಾದ ಲಿಂಗಮ್ಮ, ಸಿರಿವಂತೆ, ಮಗ ಶಾಂತಯ್ಯರೊಂದಿಗೆ ತೊಗರ್ಸಿಯನ್ನು ತೊರೆದು ಕುರಿಯ ಹಿಂಡು ಕಾಯುತ್ತಾ ದೂರ ಹೋಗುತ್ತಾನೆ. ಅಲ್ಲಿ ತಂದೆ ಪದ್ಮಗೊಂಡನು ರಾಕ್ಷಸ ಜಾತಿಯ ಸಿರಿವಂತೆಯೊಂದಿಗೆ ಊಟ ಮಾಡುವುದು ಶಾಂತಯ್ಯನಿಗೆ ಸರಿ ಬರುವುದಿಲ್ಲ. ಆಗ -

"ರಕ್ಕಸಿಯ ಕುಲದವಳೊಡನೆ ಭೋಜನ ಮಾಡೆ
ದಕ್ಕೊದೆ ತಿಂಬುವ ಅನ್ನ
ಅತ್ತಲು ಗುರು ನೀನೆ ಗಲಿಯನುತಲಿ ಆ
ಚಿಕ್ಕ ಶಾಂತನು ಕಡೆಗಾದ" (ಸಂ. ೩, ಪ. ೩೨)

ತಂದೆಯ ಕುರಿಯ ಹಿಂಡಿನಲ್ಲಿ ಸಮಭಾಗವನ್ನು ಪಡೆದುಕೊಂಡು ಹೆಂಡತಿ ದೇವಮ್ಮನೊಂದಿಗೆ ತಂದೆಯಿಂದ ಬೇರೆಯಾಗಿ ಹೋಗಿ ಬಿಡುತ್ತಾನೆ. ಹೀಗೆ ತಂದೆಯಿಂದ ಬೇರೆಯಾದ ಶಾಂತಯ್ಯನು ಅಚಲ ನಿಷ್ಠೆಯಿಂದ ಶಿವಪೂಜೆಯಲ್ಲಿ ನಿರತನಾಗುತ್ತಾನೆ. ಈ ವಿವರಣೆಯಿಂದ ಶಾಂತಮುತ್ತಯ್ಯನ ತಂದೆ ಪದ್ಮಗೊಂಡ ತಾಯಿ ಲಿಂಗಮ್ಮ ಎಂಬುದು ಸ್ಪಷ್ಟವಾಗುತ್ತದೆ.

### ೨.೫. ಲಿಂಗ ದೀಕ್ಷೆ

ಶಾಂತಮುತ್ತಯ್ಯನವರ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ನೀಡುವ ಪ್ರಮುಖ ಕೃತಿಗಳು ಎರಡು. ಒಂದು ರಸ್ತಾಪುರ ಭೀಮಕವಿಯ 'ಹಾಲ್ಮತೋತ್ತೇಜಕ ಪುರಾಣ'. ಇನ್ನೊಂದು 'ತಗರ ಪವಾಡ' ವೆಂಬ ಸಾಂಗತ್ಯ ಕೃತಿ. ಇವು ಪುರಾಣ ಕೃತಿಗಳಾದರೂ ಪುರಾಣದ ಒಡಲಿನಲ್ಲಿ ಚರಿತ್ರೆ ಅಡಗಿರುವುದನ್ನು ಮರೆಯುವಂತಿಲ್ಲ. "ಇಂಥ ಕೃತಿಗಳ ಅಧ್ಯಯನವೆಂದರೆ ಸಾಹಿತ್ಯದಲ್ಲಿ ಇತಿಹಾಸವನ್ನು, ಆ ಇತಿಹಾಸದಲ್ಲಿ ಸಂಸ್ಕೃತಿಯನ್ನು ಹುಡುಕುವುದೇ ಆಗಿದೆ"[೫] ಎಂಬ ಮಾತು ಇಲ್ಲಿ ಅರ್ಥವತ್ತಾಗಿ ಕಾಣುತ್ತದೆ. ಆದ್ದರಿಂದ ಶಾಂತಮುತ್ತಯ್ಯನವರನ್ನು ಕುರಿತು ಬಂದಿರುವ ಲಿಂಗದೀಕ್ಷೆಯ ವಿವರಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಅವಲೋಕಿಸಬಹುದಾಗಿದೆ.

ಕುರುಬರ ಗುರುವರ್ಗದವರಾದ ಒಡೆಯರುಗಳ ನೆಲೆಗಳಿಗೆ ಕ್ಷೇತ್ರಕಾರ್ಯ ನಿಮಿತ್ಯವಾಗಿ ಭೇಟಿಯನ್ನು ನೀಡಿ, ಅವರ ಐತಿಹಾಸಿಕ ಹಿನ್ನೆಲೆಯ ಬಗ್ಗೆ ಪ್ರಶ್ನೆಯನ್ನು ಮಾಡಿದರೆ ಸಾಮಾನ್ಯವಾಗಿ ಈ ರೀತಿಯಾಗಿ ಉತ್ತರವನ್ನು ನೀಡುತ್ತಾರೆ. "ನಮ್ಮ ಮೂಲ ಪುರುಷ ಸರೂರು ಶಾಂತಮುತ್ತಯ್ಯನವರು. ಅವರು ಅಡವಿಯಲ್ಲಿ ಕುರಿಗಳನ್ನು ಮೇಯಿಸುತ್ತಲಿರುವಾಗ ಶ್ರೀ ರೇವಣಸಿದ್ಧರು ದರ್ಶನವನ್ನು ನೀಡಿ ಲಿಂಗದೀಕ್ಷೆಯನ್ನು ಕೊಟ್ಟು ಕುರುಬ ಕುಲಕ್ಕೆ ಗುರುಗಳನ್ನಾಗಿ ಮಾಡಿದರು" ಎಂದು ಅವರು ನೀಡುವ ಅಭಿಪ್ರಾಯಕ್ಕೆ ಒಡೆಯರುಗಳ ಬಿರುದಾವಳಿಗಳು ಸಮರ್ಥನೆಯನ್ನು ನೀಡುತ್ತವೆ.

ರಸ್ತಾಪುರ ಭೀಮಕವಿಯ "ಹಾಲ್ಮತೋತ್ತೇಜಕ ಪುರಾಣ"ದಲ್ಲಿ ಶಾಂತಮುತ್ತಯ್ಯನವರನ್ನು ಕುರಿತು ಬಂದಿರುವ ಸಂಗತಿಗಳನ್ನು ಹೀಗೆ ಸಂಗ್ರಹಿಸಬಹುದು. "ಶಿವನಿಂದ ಶಾಪಕ್ಕೆ ಒಳಗಾದ ರೇಣುಕನು ಕೊಲ್ಲಿ

ಪಾಕಿಯ ಸೋಮೇಶ್ವರ ಲಿಂಗದಿಂದ ಉದ್ಭವಿಸಿ ರೇವಣಸಿದ್ಧನೆಂಬ" ಹೆಸರಿನಿಂದ ದೇಶ ಪರ್ಯಟನೆಯನ್ನು ಮಾಡುತ್ತ ಸರೂರ ಸೀಮಗೆ ಬರುತ್ತಾನೆ. ಅಲ್ಲಿ ಕುರಿಯ ಹಿಂಡನ್ನು ಮೇಯಿಸುತ್ತಿದ್ದ 'ಶಾಂತಮುತ್ತಯ್ಯ ನೆಂಬ ಶಿವಭಕ್ತನಿರುತ್ತಾನೆ. ಈ ಶಾಂತಮುತ್ತಯ್ಯನಿಗೆ ಸುಂದರಾಕಾರದ ಸೋಯಿಮುತ್ತಯ್ಯ, ಜಗಮುತ್ತಯ್ಯ, ಲಲಿತಮುತ್ತಯ್ಯ' ಎಂಬ ಮೂರು ಜನ ಮಕ್ಕಳಿರುತ್ತಾರೆ. ಅವರು ಅಪಾರವಾದ ಕುರಿಯ ಹಿಂಡನ್ನು ಸಲಹುತ್ತ ಆನಂದದಿಂದ ಇರುತ್ತಿರುವಾಗ -

ತುರುಗಳಪಾಲಿಸುತ್ತುಲ್ಲಾಸದಿಂದ ಸಂ
ಚರಿಸಿ ಕಲ್ಲಿನ ಕೆರೆಯ ಭಾಗದಲ್ಲಿ ನಿಲಯಮಂ
ವಿರಚಿಸುತ ಪ್ರೇಮದಿಂಚರರಿಂಗೆ ಪನ್ನೆರಡು ಕಂಬಿ ಪಾಲ್ಗೊಟ್ಟು ಸತತ
ಹರುಷದಿಂದರಲಲ್ಲಿಗಭಸುತ ಸಿದ್ಧೇಂದ್ರ
ನಿರದೆ ಬಂದಮೃತಮಂ ನೀಡೇಂದು ಸಮ್ಮೋಹ
ವರಸಿ ನಿಲ್ಲಲು ಶಾಂತಮುತ್ತಯ್ಯ ಕಂಡು ಪದಪದ್ಮಕಂಬಿವಂದಿಸಿದನು

(ಹಾಲ್ಮತೋತ್ತೇಜಕ ಪುರಾಣ - ಪ. ೨-೧೩).

ಪ್ರತಿನಿತ್ಯ ಹನ್ನೆರಡು ಕಂಬಿ ಹಾಲನ್ನು ಹಿಂಡಿ ಅದನ್ನು ಬೇಡಿದವರಿಗೆ ದಾನವನ್ನು ಮಾಡುತ್ತ ಶಾಂತಮುತ್ತಯ್ಯನು ಸಂತೋಷದಿಂದರುತ್ತಾನೆ. ಒಂದು ದಿನ ಅಲ್ಲಿಗೆ ಅಭಸುತನಾದ ರೇವಣಸಿದ್ಧನು ಬಂದು, ಅಮೃತವನ್ನು (ಹಾಲನ್ನು) ದಾನ ನೀಡೆಂದು ಕೇಳುತ್ತಾನೆ. ಆಗ ಶಾಂತಮುತ್ತಯ್ಯನು ಅವನ ಪಾದ ಕಮಲಕ್ಕೆ ಅಭಿವಂದಿಸುತ್ತಾನೆ. ಹಾಗೆ ಅಭಿವಂದಿಸಿದ ಶಾಂತಯ್ಯನನ್ನು ರೇವಣಸಿದ್ಧನು ಪ್ರೀತಿಯಿಂದ ಎತ್ತಿ "ನೀನಂದ ನುಡಿಗಳು ಸಿದ್ಧಿಸಲಿ" ಎಂದು ಹಾರೈಸುತ್ತಾನೆ. ನಂತರ ರೇವಣಸಿದ್ಧನು ಶಿವನ ಸದ್ಭಕ್ತಿ ಲೀಲೆಗಳನ್ನು ಅವರಿಗೆ ಬೋಧಿಸುತ್ತಾನೆ. ಶಿವನ ಸದ್ಭಕ್ತಿ ಲೀಲೆಗಳನ್ನು ಕೇಳಿದ ಶಾಂತಯ್ಯನಿಗೆ ಲಿಂಗದೀಕ್ಷೆ ಯನ್ನು ಪಡೆಯಬೇಕೆಂಬ ಆಸೆಯುಂಟಾಗುತ್ತದೆ. ಆಗ ಶಾಂತಮುತ್ತಯ್ಯನು "ತಂದೆ ನನಗೆ ಲಿಂಗದೀಕ್ಷೆ ಯನ್ನು ನೀಡಿ ಕಾಪಾಡಬೇಕು" ಎಂದು ಭಿನ್ನವಿಸಿಕೊಳ್ಳುತ್ತಾನೆ. ಅವನ ಮಾತಿಗೆ ಒಪ್ಪಿದ ರೇವಣಸಿದ್ಧನು ಆಗ ಮೋಕ್ತವಾಗಿ ಒಂದು ಸುಮೂರ್ತದಲ್ಲಿ -

"ಲಿಂಗದೀಕ್ಷೆಯನ್ನಿತ್ತು ಕ್ಷೀರಕುಲಧ್ಯಕ್ಷ
ನಂಗೊಳಿಸಿ ಗುರುಕಂಕಣವಧರಿಸಿ ಕರಕೆಘನ
ಕಂಗೊಳಿಪತೆರದಿ ಪಟ್ಟವಗಟ್ಟಿ ಗುರುನಾಮಶಾಸನವಗೈದು ಮತ್ತಂ
ತುಂಗರೇವಣಸಿದ್ಧ ಶಾಂತಮುತ್ತಯ್ಯಂಗೆ
ಪಿಂಗದೆ ಕುತೂಹಲದೊಳಾಶಿರ್ವಚಿಸಿ ದಯಾ
ಪಾಂಗದಿಂ ಪಾಲ್ಕವಿದು ಬಳಕಲ್ಲಿಂದ ನಡೆದ ಬಾಂದಳ ಮಾರ್ಗಕೆ"

(ಹಾಲ್ಮತೋತ್ತೇಜಕ ಪುರಾಣ - ಪ. ೨-೧೬).

ಎಂಬ ವಿವರಗಳನ್ನು ನೋಡಿದರೆ ಲಿಂಗಾಪೇಕ್ಷಿಯಾದ ಶಾಂತಮುತ್ತಯ್ಯನಿಗೆ ರೇವಣಸಿದ್ಧರು ಲಿಂಗದೀಕ್ಷೆ ಯನು ದಯಪಾಲಿಸಿ, ಗುರುಕಂಕಣವನ್ನು ಕರಕೆ ಕಟ್ಟಿ, ಗುರುನಾಮ ಶಾಸನವನ್ನು ರಚಿಸಿ ಕುರುಬ

ಕುಲಕ್ಕೆ ಅಧ್ಯಕ್ಷನನ್ನಾಗಿ ಮಾಡಿದ ವಿಷಯವನ್ನು ಹೇಳಲಾಗಿದೆ." ಇಲ್ಲಿ ಬಂದಿರುವ ವಿವರಗಳನ್ನು ಗಮನಿಸಿದಾಗ ಮೂಲತಃ ಕುರುಬನೂ ಭಕ್ತನೂ ಆಗಿರುವ ಶಾಂತಮುತ್ತಯ್ಯನವರಿಗೆ ಗುರುರೇವಣಸಿದ್ಧರು ಸರವೂರಿನಲ್ಲಿ ದರ್ಶನವನ್ನು ನೀಡಿ, ದೀಕ್ಷೆಯನ್ನು ಕೊಟ್ಟು ಕುರುಬ ಕುಲಕ್ಕೆ ಒಡೆಯನನ್ನಾಗಿ ಮಾಡಿದ ವಿಚಾರವನ್ನು ಈ ಕೃತಿಯು ಸ್ಪಷ್ಟಪಡಿಸುತ್ತದೆ.

"ಹಿಡಿದ ತ್ರಿಶೂಲ ಕಪ್ಪರ ಕಂಥೆ ಭಸಿತವು
ಪಡಿದ ರುದ್ರಾಕ್ಷಿ ಪಾವುಗೆಯು
ಕುಡಿಮೀಸೆ ಕಿಡಿಗಣ್ಣು ನಡೆವ ರೌದ್ರಾಕಾರ
ಒಡೆಯ ತಾ ಬಂದು ನಿಂದಿರಲು (ಸಂ. ೩, ಪ. ೪೩).

ಹೀಗೆ ಶಾಂತಯ್ಯನಲ್ಲಿಗೆ ಬಂದ ಕೆಂಡಗಣ್ಣನನ್ನು (ರೇವಣಸಿದ್ಧ) ಶಾಂತಯ್ಯನು ಕಂಡು ದಂಪತಿಗಳು ಶ್ರದ್ಧೆ-ಭಕ್ತಿಯಿಂದ ಸತ್ಕರಿಸುತ್ತಾರೆ. ಆರೋಗಣೆಗೆ ಎಡೆ ಮಾಡುವ ವೇಳೆಗೆ ಶಿವನು ಕಂದನ ಭಕ್ತಿಯನ್ನು ಒರೆದು ನೋಡುವೆನೆಂದು ಜಂಗಮ ಕೋಟಿಯನ್ನು ಕರೆಯುತ್ತಾನೆ. ಹಾಗೆ ಬಂದ ಜಂಗಮ ಕೋಟಿಯನ್ನು ದಂಪತಿಗಳು ಪರಶಿವನ ಅನುಗ್ರಹದಿಂದ ಸಂತೃಪ್ತಿಪಡಿಸುತ್ತಾರೆ. ಶಾಂತಯ್ಯನ ಭಕ್ತಿಯಿಂದ ಸಂತೋಷಗೊಂಡ ಶಿವನು (ರೇವಣಸಿದ್ಧನು) ಶಾಂತಯ್ಯನಿಗೆ "ಏನು ಬೇಕು ಬೇಡು" ಎಂದು ಕೇಳುತ್ತಾನೆ. ಅದಕ್ಕೆ ಶಾಂತಯ್ಯನು "ಏನು ಬೇಡಲಿ ದೇವ ನೀನಿತ್ತ ಭಾಗ್ಯವು ಎನಗೆ ಕಡಿಮೆಯಿಲ್ಲ. ಆದರೆ ಮೋಕ್ಷ ದೀಕ್ಷೆಗಳಿಲ್ಲದೆ ತಾನಿರುವುದು ಸಮ್ಮತವೇ"? ಎಂದು ದೀಕ್ಷೆಗಾಗಿ ಅಂಗಲಾಚಿ ಬೇಡಿಕೊಳ್ಳುತ್ತಾನೆ. ಅವನ ಭಕ್ತಿಗೆ ಮೆಚ್ಚಿದ ಶಿವನು (ರೇವಣಸಿದ್ಧನು) ಪಂಚ ಕಳಶಗಳನ್ನು ಹೂಡಿ ಶಾಂತಯ್ಯನಿಗೆ ದೀಕ್ಷೆಯನ್ನು ನೀಡುತ್ತಾನೆ. ಅದೇ ಸಮಯದಲ್ಲಿ ಕೈಲಾಸದಿಂದ ಕರಿಮಲ್ಲಿಗೆ ಸರ ಸುರಿದುದರಿಂದ ಅದು 'ಸರವೂರು' ನಾಮದಿಂದ ಪ್ರಸಿದ್ಧವಾದ ಕ್ಷೇತ್ರವಾಗುತ್ತದೆ. ಶಾಂತಮುತ್ತಯ್ಯ ಅಲ್ಲಿಯೇ ನೆಲೆಸುತ್ತಾನೆ. ಆ ಸ್ಥಳ ಒಡೆಯರ ಮೂಲ ಸ್ಥಳವಾಗುತ್ತದೆ. ಅಲ್ಲಿಂದ ಗುರುಒಡೆಯರು ಬೇರೆ ಬೇರೆ ಪ್ರದೇಶಗಳಿಗೆ ಗುರುಗಳಾಗಿ ಕಾರ್ಯನಿರ್ವಹಿಸುವುದಕ್ಕೆ ಹೋಗುತ್ತಾರೆ.

### ೨.೬. ಗುರು ಪರಂಪರೆ

ಯಾವುದೇ ಒಂದು ಜನಾಂಗದ ಧಾರ್ಮಿಕ ಪರಂಪರೆಯನ್ನು ಅವಲೋಕನ ಮಾಡಿದಾಗ, ಆಯಾ ಜನಾಂಗವನ್ನು ಧಾರ್ಮಿಕವಾಗಿ ಮುನ್ನಡೆಸಿಕೊಂಡು ಹೋಗಲು ಮೂಲ ಪುರುಷ ಇರುವುದು ಕಂಡು ಬರುತ್ತದೆ. ಮಹಮದೀಯರಿಗೆ ಮಹಮ್ಮದ ಪೈಗಂಬರ್, ಕ್ರೈಸ್ತರಿಗೆ ಏಸುಕ್ರಿಸ್ತ, ಬೌದ್ಧರಿಗೆ ಗೌತಮಬುದ್ಧ, ಜೈನರಿಗೆ ಮಹಾವೀರ, ಶಿಖ್‌ರಿಗೆ ಗುರುನಾನಕ್ ಮೂಲ ಗುರುಗಳಿರುವಂತೆ ಕುರುಬ ಜನಾಂಗದವರಿಗೂ ಇಂಥ ಧರ್ಮ ಸಂಸ್ಥಾಪಕರಿರುವುದು ಕಂಡು ಬರುತ್ತದೆ.

ಕುರುಬರ ಗುರು ಪರಂಪರೆಯಲ್ಲಿ ಮುಖ್ಯವಾಗಿ ಮೂರು ಸಂಪ್ರದಾಯಗಳಿವೆ. ಅವುಗಳೆಂದರೆ ಒಂದು:- ರೇವಣಸಿದ್ಧ ಸಂಪ್ರದಾಯ. ಎರಡು:- ಸಿದ್ಧರಾಮೇಶ್ವರ ಸಂಪ್ರದಾಯ. ಮೂರು:- ಅಮೋಘ ಸಿದ್ಧೇಶ್ವರ ಸಂಪ್ರದಾಯ. ರೇವಣಸಿದ್ಧೇಶ್ವರ ಶಿಷ್ಯ ಶಾಂತಮುತ್ತಯ್ಯ. ಈತನ ಅನುಯಾಯಿಗಳನ್ನು 'ಶಾಂತೊಡೆಯರು' ಎಂದು ಕರೆಯುತ್ತಾರೆ. ಶಿವಯೋಗಿ ಸಿದ್ಧರಾಮನ ಶಿಷ್ಯ 'ಸಿದ್ಧಮಂಕ'. ಈತನ

ಅನುಯಾಯಿಗಳನ್ನು 'ಮಂಕೊಡೆಯರು', 'ಗುರುವಿನನವರು' ಎಂದು ಕರೆಯುತ್ತಾರೆ. ಇನ್ನು ಸಿದ್ಧಪುರುಷ ಅಮೋಘಸಿದ್ಧನ ಸಂತತಿಯವರನ್ನು ಅಮೋಘಸಿದ್ಧ ಒಡೆಯರು ಎಂದು ಕರೆಯುತ್ತಾರೆ. ಈ ಮೂರು ಕವಲುಗಳಲ್ಲಿ ಒಡಮೂಡಿರುವ ಗುರುಪರಂಪರೆಯನ್ನು ಹೀಗೆ ಗುರುತಿಸಬಹುದಾಗಿದೆ.




ಈ ಮೇಲೆ ತಿಳಿಸಿದಂತೆ ಮೂರು ಸಂಪ್ರದಾಯದ ಗುರು ಪರಂಪರೆಯ ಮಠಗಳೂ, ದೇವಾಲಯಗಳು ಕರ್ನಾಟಕದಾದ್ಯಂತ ಇರುವುದು ಕಂಡು ಬರುತ್ತದೆ. ಪ್ರಸ್ತುತ ಸಂಪ್ರಬಂಧದಲ್ಲಿ ಶಾಂತಮುತ್ತಯ್ಯನಿಗೆ ಸಂಬಂಧಿಸಿದ ಗುರು ಪರಂಪರೆಯನ್ನು ಮಾತ್ರ ಅಧ್ಯಯನಕ್ಕೊಳಪಡಿಸಲಾಗಿದೆ.

### ೨.೬.೧. ರೇವಣಸಿದ್ಧೇಶ್ವರ

ಪ್ರಾಚೀನ ಕಾಲದಿಂದಲೂ ಕುರುಬ ಜನಾಂಗದವರು ತಮ್ಮ ಮೂಲ ಗುರುವೆಂದು ಆರಾಧಿಸಿಕೊಂಡು ಬಂದಿರುವ ಶ್ರೀ ಗುರು ರೇವಣಸಿದ್ಧರಿಗೆ ಅಗ್ರಸ್ಥಾನ ಸಲ್ಲುತ್ತದೆ. ಈತ ಕರ್ನಾಟಕದ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಪ್ರಸಿದ್ಧರಾಗಿರುವ ಕುರುಬ ಮತ್ತು ಲಿಂಗಾಯತ ಸಮಾಜಗಳೆರಡಕ್ಕೂ ಪೂಜ್ಯನೀಯ ವ್ಯಕ್ತಿಯಾಗಿದ್ದಾನೆ. ಎರಡೂ ಸಮುದಾಯಗಳು ತಮ್ಮ ಮೂಲ ಪುರುಷನೆಂದು ಹೇಳುತ್ತವೆ. ಕುಲಮೂಲ ವ್ಯಕ್ತಿಯನ್ನಾಗಿ ಮಾಡಿಕೊಂಡು ಆರಾಧಿಸುತ್ತಿವೆ.

ಈತನನ್ನು ಕುರಿತು ಲಿಖಿತ ಪರಂಪರೆಯಲ್ಲಿಯೂ ಮತ್ತು ಮೌಖಿಕ ಪರಂಪರೆಯಲ್ಲಿಯೂ ಸಾಕಷ್ಟು ಪ್ರಮಾಣದ ಸಾಹಿತ್ಯ ದಾಖಲೆಗಳು ಸೃಷ್ಟಿಯಾಗಿರುವುದು ಕಂಡು ಬರುತ್ತದೆ. ಈ ಒಂದೊಂದು ಪರಂಪರೆಯ ಆಕರ ಸಾಮಗ್ರಿಗಳನ್ನು ಇಟ್ಟುಕೊಂಡು ಒಂದೊಂದು ಸ್ವತಂತ್ರ ಅಧ್ಯಯನ ಕೈಕೊಳ್ಳಬಹುದಾದಷ್ಟು ವಿಪುಲ ಪ್ರಮಾಣದ ಆಕರ ಸಾಮಗ್ರಿ ದೊರೆಯುವುದು ಈತನ ಪ್ರಸಿದ್ಧ ವ್ಯಕ್ತಿತ್ವಕ್ಕೆ ಕಾರಣವಾಗಿದೆ.[೬]

ಐತಿಹಾಸಿಕ ವ್ಯಕ್ತಿಯಾಗಿರುವ ರೇವಣಸಿದ್ಧನನ್ನು ಕುರಿತು ಕಾವ್ಯಗಳು, ಜನಪದ ಹಾಡುಗಳು, ಶಾಸನಗಳು ರಚನೆಗೊಂಡಿವೆ. ಈತನನ್ನು ಕುರಿತು ಅಧ್ಯಯನ ಮಾಡುವವರಿಗೆ ಇವು ಆಕರ ಸಾಮಗ್ರಿ ಗಳಾಗಿವೆ. ರೇವಣಸಿದ್ಧರನ್ನು ಕುರಿತು ಮೊದಲು ಕಾವ್ಯವನ್ನು ರಚಿಸಿದವನು ಮಹಾಕವಿ ಹರಿಹರ. ಆತನ ರೇವಣಸಿದ್ಧೇಶ್ವರ ರಗಳೆ ಅವನನ್ನು ಕುರಿತು ರಚನೆಗೊಂಡಿರುವ ಪ್ರಥಮ ಕೃತಿ. ಆನಂತರದಲ್ಲಿ ರೇವಣ ಸಿದ್ಧರನ್ನು ಕುರಿತು ಪುರಾಣಗಳನ್ನು ವೀರಶೈವರೂ ಮತ್ತು ಹಾಲುಮತ ಜನಾಂಗದವರೂ ರಚಿಸಿರುವುದು

ಕಂಡು ಬರುತ್ತದೆ. ಈ ಕೃತಿಗಳಲ್ಲೆಲ್ಲ ರೇವಣಸಿದ್ಧರ ಜನನದ ಪ್ರಸಂಗವನ್ನು ಪೌರಾಣಿಕ ಹಿನ್ನೆಲೆಯಲ್ಲಿ ನಿರೂಪಿತವಾಗಿರುವುದನ್ನು ಕಾಣಬಹುದಾಗಿದೆ. ಅದು ಹೀಗಿದೆ. "ರಜತಗಿರಿಯ ಶಿವನ ಸಭೆಯಲ್ಲಿ ನಂದೀಶ, ವೀರಭದ್ರ, ದಾರುಕ, ರೇಣುಕ ಮೊದಲಾದ ಗಣಂಗಳೂ ಗರುಡು ಗಂಧರ್ವ, ಕಿನ್ನರ ಕಿಂಪುರುಷರು ಕುಳಿತುಕೊಂಡಿರುವಾಗ, ಶಿವನು ರೇಣುಕನ ಮುಖವನ್ನು ನೋಡಿ ಬಾಯ ತಾಂಬೂಲನ್ನು ತಂದುಕೊಡಲು ಹೇಳುತ್ತಾನೆ. ಆಗ ರೇಣುಕನು ಬರುವಾಗ ದಾರುಕನೆಂಬುವವನನ್ನು ದಾಟುತ್ತಾನೆ. ಇದರಿಂದ ನೊಂದುಕೊಂಡ ದಾರುಕನನ್ನು ಸಂತೈಸಿ ಶಿವನು ರೇಣುಕನಿಗೆ ದಾರುಕನನ್ನು ದಾಟಿರುವ ಪ್ರಮಾದಕ್ಕೆ ನಿನಗೆ ನರಜನ್ಮ ಪ್ರಾಪ್ತವಾಯಿತೆಂದು ಶಾಪವನ್ನು ಕೊಡುತ್ತಾನೆ. ಇದರಿಂದ ರೇಣುಕನು ಭಯಗೊಂಡು ನಡುಗಿ ಕೈಮುಗಿದು ವಿಶಾಪವನ್ನು ಕರುಣಿಸುವುದೆಂದು ಬೇಡಿಕೊಳ್ಳುತ್ತಾನೆ. ಕರುಣೆಗೊಂಡ ಶಿವನು ಭೂಲೋಕದಲ್ಲಿ ಶ್ರೇಷ್ಠವಾದ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಜನಿಸಿ ಸುಖ ದುಃಖವನ್ನು ಅನುಭವಿಸಿ ಮರಳಿ ಬರಬೇಕೆಂದು ಹೇಳುತ್ತಾನೆ. ಅದರಂತೆ ರೇಣುಕನು ಕೊಲ್ಲಿಪಾಕಿ ಸೋಮನಾಥ ಲಿಂಗದಲ್ಲಿ ಜನಿಸುತ್ತಾನೆ. ರೇವಣಸಿದ್ಧರು ಜನಿಸಿದ ಪರಿಯನ್ನು ಹರಿಹರ ಕವಿ ಹೀಗೆ ವರ್ಣಿಸಿದ್ದಾನೆ.

"ಅದೆ ಕಂಥೆಯದೆ ವದನವದೆ ವಜ್ರಕುಂಡಲಂ
ಅದೆ ವಕ್ಷವದೆ ಹಸ್ತವದೆ ಹಿಡಿದ ಲಾಕುಳಂ
ಅದೆ ಕೋವಣಂ ನೋಡೆನುತ್ತಮಿರಲುದಿಸಿದಂ
ಸದಮಳನಿಪ್ಪ ಶಿವಲಿಂಗದಿಂ ಹುಟ್ಟಿದಂ" (ಸಾಲು ೬೦).

ಹೀಗೆ ರೇವಣಸಿದ್ಧರು ಜನಿಸುವ ಸಂದರ್ಭದಲ್ಲಿ ಕೊಲ್ಲಿಪಾಕಿಯ ಸೋಮನಾಥ ದೇವಾಲಯದಲ್ಲಿ ಅಸಂಖ್ಯಾತ ಭಕ್ತರು ಕವಿ-ಗಮಕಿ, ವಾದಿ, ವಾಗ್ಮಿಗಳೂ ವಿದಗ್ಧ, ವಿದಗ್ಧ ಮುಗ್ಧೆಯರು, ಕಲಾವಿದರು, ಗಾಯಕರು, ಸಂತೋಷದಿಂದ ಕುಳಿತುಕೊಂಡಿದ್ದರೆಂದು ಹರಿಹರ ಕವಿಯು ಹೇಳುತ್ತಾನೆ. ಅನಂತರ ಬಂದ ಪುರಾಣ ಕವಿಗಳು ರೇವಣಸಿದ್ಧರ ಜನನದ ಪ್ರಸಂಗವನ್ನು ಇದೇ ದಾಟಿಯಲ್ಲಿ ನಿರೂಪಿಸಿರುವುದು ಕಂಡು ಬರುತ್ತದೆ.

ರೇವಣಸಿದ್ಧರು ಕೊಲ್ಲಿಪಾಕಿ ಸೋಮನಾಥ ಲಿಂಗದಲ್ಲಿ ಜನಿಸಿದರು ಎಂಬ ಪುರಾಣಕರ್ತರ ಅಭಿಪ್ರಾಯವನ್ನು ಒಪ್ಪದೇ ಅವರು ಕುರುಬ ಮೂಲದಿಂದ ಹುಟ್ಟಿ ಬಂದವರು ಎಂಬ ಅಭಿಪ್ರಾಯಗಳೂ ಇವೆ. ಅಂಥವುಗಳಲ್ಲಿ ಒಂದು ಅಭಿಪ್ರಾಯ ಹೀಗಿದೆ - "ಹಾಲುಮತದ ಮುದ್ದುಗೊಂಡ ಮತ್ತು ಮುದ್ದವ್ವ ಎಂಬ ದಂಪತಿಗಳ ಏಳು ಜನ ಮಕ್ಕಳಲ್ಲಿ ಕೊನೆಯವನೇ ಉಂಡಾಡ ಪದ್ಮಗೊಂಡ ಅಥವಾ ಉಂಡಾಡ ಪದ್ಮಣ್ಣ. ಈ ಉಂಡಾಡು ಪದ್ಮಣ್ಣನ ಮೊದಲನೆಯ ಹೆಂಡತಿ ಜಿಂಕಾದೇವಿಯಲ್ಲಿ ಐದು ಜನ ಮಕ್ಕಳು ಹುಟ್ಟುತ್ತಾರೆ. ೧. ಜಗ್ಗಲಿ ಮುತ್ತಯ್ಯ, ೨. ಸಹಾಯ ಮುತ್ತಯ್ಯ, ೩. ಸೋಹ ಮುತ್ತಯ್ಯ, ೪. ಶಾಂತಿಮಯಮುತ್ತಯ್ಯ, ೫. ದೇವರಾಜ. ನಾಲ್ಕನೆಯ ಮಗನಾದ ಶಾಂತಿಮಯ ಮುತ್ತಯ್ಯ ಶಿವಭಕ್ತ ಗುರುಭಕ್ತರೊಡನೆ ಸಮಾಜ ಹಿತ ಕಾರ್ಯವನ್ನು ಮಾಡುತ್ತಾ ಕೆಲವು ಕಾಲ ಕೊಲ್ಲಿಪಾಕಿ ಸಿಮೇಯಲ್ಲಿ ನೆಲೆಸಿದರು. ಅಲ್ಲಿ ಸೋಮೇಶ್ವರ ಕೃಪೆಯಿಂದ ರೇವಣಸಿದ್ಧ ಹುಟ್ಟಿದ ಮತ್ತು ಅಲ್ಲಿಯೇ ಸಮಾಧಿಯಾದ. ಅವನು ಹುಟ್ಟಿದ್ದು ಸುಮಾರು ೧೧೧೦ರಲ್ಲಿ. ಸಮಾಧಿಯಾದದ್ದು ೧೨೧೭ರಲ್ಲಿ, ಏಕೆಂದರೆ ಅವರು (೧೦೭) ಒಂದು ನೂರಾ ಏಳು ವರ್ಷಗಳವರೆಗೆ ಬದುಕಿದ ದೀರ್ಘಾಯುಷಿ ಎಂದು ಗೊತ್ತಾಗುತ್ತದೆ.

ಮೇಲಿನ ಈ ಅಭಿಪ್ರಾಯವನ್ನು ಬೆಂಬಲಿಸುವಂತೆ ಕ್ರಿ.ಶ. ೧೧೮೭ರ ಸಿರವಾಳ ಶಾಸನವು ಕೂಡ ರೇವಣ ಸಿದ್ಧರನ್ನು ಶಾಂತಿಮಯ್ಯಂಗಳ ಮಗ ಎಂದು ಹೇಳಿರುವುದನ್ನು ಇಲ್ಲಿ ನೋಡಬಹುದು.

"ಶ್ರೀಮದಣಿಮಾದ್ಯಷ್ಟಗುಣ ಸಂಪನ್ನರುಂ ತತ್ವಜ್ಞಾನ ಪ್ರಸನ್ನರುಂ ಷಡಂಗ ಹೋಗ ಸಂಗದರುಂ ಸಸಾರಭ್ಯಸಂಗಬಸರುಮಪ್ಪ ಶಿವಯೋಗಿ ಶಾಂತಿಮಯ್ಯ ದೇವಯ್ಯಂಗಳ ಪುತ್ರ ರೇವಣ ದೇವಯ್ಯಂಗಳ ಪ್ರಸಿದ್ಧಿತಿಕೆದುಂತೆನೆ" ಎಂದು ವರ್ಣಿಸಿರುವುದನ್ನು ಗಮನಿಸಬಹುದು. ರೇವಣಸಿದ್ಧರ ತಂದೆ ಯಾವ ಶಾಂತಿಮಯ್ಯರನ್ನು, ಶ್ರೀಮದಣಿಮಾದ್ಯಷ್ಟಗುಣಸಂಪನ್ನ, ತತ್ವಜ್ಞಾನ ಪ್ರಸನ್ನ, ಶಿವಯೋಗಿ ಎಂದು ವರ್ಣಿಸಿ ರುವುದನ್ನು ನೋಡಿದರೆ ಸಿದ್ಧಪುರುಷನಾದ ರೇವಣಸಿದ್ಧರಿಗೆ ಜನ್ಮ ನೀಡಿದ ತಂದೆ ಶಾಂತಿಮಯ್ಯನೂ ಅಸಾಮಾನ್ಯವಾದ ವ್ಯಕ್ತಿಯೇ ಆಗಿದ್ದ ಎಂಬುದು ಸ್ಪಷ್ಟವಾಗುತ್ತದೆ.

ಆದರೆ 'ಹಾಲುಮತೋತ್ತೇಜಕ ಪುರಾಣ, ತಗರ ಪವಾಡ, ಕೃತಿಗಳಲ್ಲಿ ಈ ಶಾಂತಮಯಮುತ್ತಯ್ಯ ನನ್ನು ರೇವಣಸಿದ್ಧರ ಶಿಷ್ಯನೆಂದು ಹೇಳಲಾಗಿದೆ. "ಲೋಕ ಸಂಚಾರಿಯಾದ ರೇವಣಸಿದ್ಧರು ಸರವೂರಿಗೆ ಬರುತ್ತಾರೆ. ಅಲ್ಲಿ ಹಿಂಡಿನ ಶಾಂತಮುತ್ತಯ್ಯನೆಂಬ ಕುರುಬ ಭಕ್ತನಿರುತ್ತಾನೆ. ರೇವಣಸಿದ್ಧರು ಶಾಂತ ಮುತ್ತಯ್ಯನಿಗೆ ಲಿಂಗದೀಕ್ಷೆಯನ್ನು ಕೊಟ್ಟು ಗುರು ಕಂಕಣವನ್ನು ಕಟ್ಟಿ ಕುರುಬ ಕುಲಕ್ಕೆ ಅಧ್ಯಕ್ಷನನ್ನಾಗಿ ಮಾಡುತ್ತಾನೆ. ಹೀಗೆ ರೇವಣಸಿದ್ಧರಿಂದ ದೀಕ್ಷೆಗೊಂಡ ಶಿಷ್ಯ ಶಾಂತಮುತ್ತಯ್ಯನೇ ಮುಂದೆ ರೇವಣಸಿದ್ಧರ ಆಶೀರ್ವಾದದಿಂದ ಕಲ್ಯಾಣ ಪಟ್ಟಣದಲ್ಲಿ ಸತ್ತಿರುವ ತಗರವನ್ನು ಬದುಕಿಸಿ ಪಂಥ(Cult)ವನ್ನು ಗೆದ್ದು ಬಸವಾದಿ ಶರಣರಿಂದ ಮೆಚ್ಚುಗೆಯನ್ನು ಪಡೆಯುತ್ತಾನೆ. ಹಾಗೆಯೇ ಕಲ್ಯಾಣ ಪಟ್ಟಣದಿಂದ ಹೊರ ಹಾಕಲ್ಪಟ್ಟಿರುವ ಕುರುಬರನ್ನು ಒಳಗೆ ಬರುವಂತೆ ಮಾಡುತ್ತಾನೆ. ಹೀಗಾಗಿ 'ಹಾಲುಮತ್ತೋತ್ತೇಜಕ ಪುರಾಣ' ಮತ್ತು 'ತಗರ ಪವಾಡ' ಕೃತಿಗಳಲ್ಲಿ ಬಂದಿರುವ ಈ ಸಂಗತಿಗಳು ರೇವಣಸಿದ್ಧರು ಶಾಂತಿಮಯ ಮುತ್ತಯ್ಯನ ಮಗನೆಂದು ನಿರೂಪಿಸುವುದಕ್ಕೆ ಅಡ್ಡ ಬರುತ್ತವೆ. ಆದ್ದರಿಂದ ಇವರು ತಂದೆ - ಮಕ್ಕಳೋ ಗುರು-ಶಿಷ್ಯರೋ ಎಂದು ತೀರ್ಮಾನಿಸುವುದು ಕಷ್ಟಸಾಧ್ಯವಾಗುತ್ತದೆ. ಆದರೆ ಇವರಿಬ್ಬರು ಹಾಲುಮತದ ಮಹಾಪುರುಷರೆಂಬುದರಲ್ಲಿ ಎರಡು ಮಾತಿಲ್ಲ. ರೇವಣಸಿದ್ಧರು ಕುರುಬ ಮೂಲದಿಂದಲೇ ಬಂದಿರುವ ಮಹಾಪುರುಷನೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಡಾ. ಎಂ.ಎಂ. ಕಲಬುರ್ಗಿ ಅವರು ತಮ್ಮ ಒಂದು ಲೇಖನದಲ್ಲಿ ಹೀಗೆ ನಿರೂಪಿಸಿದ್ದಾರೆ. "ನಾಥ ಪಂಥದಲ್ಲಿ ಸ್ಥೂಲವಾಗಿ 'ವಿಕಾರಿಸಿದ್ಧ' ಮತ್ತು 'ಶಿವಸಿದ್ಧ'ವೆಂದು ಎರಡು ಪ್ರಕಾರಗಳಿವೆ. ಇವುಗಳಲ್ಲಿ ವಿಕಾರಿಸಿದ್ಧ ಅನೇಕ ಬಗೆಯಾಗಿದ್ದು, ಶಿವಸಿದ್ಧ ಒಂದೇ ಬಗೆಯಾಗಿವೆ. ಸಿದ್ಧರಾಮ, ರೇವಣಸಿದ್ಧ, ಶಿವಸಿದ್ಧ ಪರಂಪರೆಯವರು. ಇವರು ನಿಜನಾಮ ರಾಮಯ್ಯ ಮತ್ತು ರೇವಣ ಇಲ್ಲಿ 'ಸಿದ್ಧ' ಪದವನ್ನು ಹಿಂದೆ ಅಂಟಿಕೊಂಡು ರೇವಣ + ಸಿದ್ಧನೆಂಬ ಹೆಸರುಗಳು ಆಕಾರ ಪಡೆದಿವೆ. ಈ ಹೆಸರುಗಳು ಇವರಿಬ್ಬರು (ಶಿವ) ಸಿದ್ಧ ಪಂಥದವರೆಂಬುದನ್ನು ಸೂಚಿಸುತ್ತವೆ. ಇದೇ ರೀತಿ ಸಿದ್ಧವೆಂಬುದುರ ಪರ್ಯಾಯ ನಾಮವಾದ 'ನಾಥ'ವೆಂಬುದು ಇವರ ಹೆಸರಿಗೆ ಅಂಟಿಸಲಾಗುತ್ತದೆ. ಈ ಪಂಥದ ರೇವಣಸಿದ್ಧ, ಸಿದ್ಧರಾಮರು ಮೂಲತಃ ಕುರುಬ ಜಾತಿಯವರು. ಇಂದಿಗೂ ರೇವಣಸಿದ್ಧನನ್ನು ತಮ್ಮ ಗುರುವೆಂದು ಕುರುಬರು ಭಾವಿಸುತ್ತಿರುವುದು. 'ರೇವಣಸಿದ್ಧ' ಹೆಸರಿನ ಮಠಗಳು ಕುರುಬ ಸಮಾಜದಲ್ಲಿ ಇರುವುದು ಇದಕ್ಕೆ ನಿದರ್ಶನ. ಸೊಲ್ಲಾಪುರದಲ್ಲಿ

ಸಿದ್ಧರಾಮನ ಅರ್ಚಕರು ಇಂದು ಲಿಂಗಾಯತರೆಂದು ಹೇಳಿಕೊಳ್ಳುತ್ತಿದ್ದರೂ ಕೆಲವೇ ವರ್ಷಗಳ ಹಿಂದೆ ಇವರನ್ನು ಜನ ಹಂಡೆ ಕುರುಬರೆಂದು ಗುರುತಿಸುತ್ತಿದ್ದುದನ್ನು ಇಲ್ಲಿ ನೆನೆಯಬಹುದು.

ಕರ್ನಾಟಕದಲ್ಲಿ ಇದೇ ರೀತಿ ಗುರುಪರಂಪರೆ ಬೆಳೆದುಕೊಂಡು ಬಂದಿದೆ. ಕುರುಬರು ಗುರುತನವನ್ನು ರೇವಣಸಿದ್ಧನಿಂದ ಪಡೆಯುತ್ತಾರೆ. ರೇವಣಸಿದ್ಧ -

"ಕಲ್ಯಾಣ ಪಟ್ಟಣದೊಳಗೆ ಅಲ್ಲೇನು ಚೋಚಿಗ
ಅಲ್ಲಿ ನಮಗುರುವಿಗೆ ಗುರುತಾನ | ಆದವೆಂದು
ಕಲ್ಲಿಗೆ ಸಾಸಣ ವೊಡುದಾವು |"

ಕುರುಬರ ಗುರುತನವನ್ನು ಪಡೆದ ರೇವಣಸಿದ್ಧ ಬಿಜ್ಜಳನ ಅರಮನೆಯಲ್ಲಿ ಒಪ್ಪಗೆ ಹಾಕಿದ ಮಣೆಯ ಮೇಲೆ ಕುಳಿತು ಪಟ್ಟದ ವೀಳ್ಯವನ್ನು ಸ್ವೀಕರಿಸುತ್ತಾನೆ. ಹೀಗೆ ಬಿಜ್ಜಳನಿಂದ ಪಟ್ಟದ ವೀಳ್ಯವನ್ನು ಸ್ವೀಕರಿಸಿದ ತಮ್ಮ ಗುರುವನ್ನು ನಾಡಿನ ಮೂಲೆ ಮೂಲೆಯಿಂದ ಕುರುಬರು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮರುಗ ಮಲ್ಲಿಗೆ ರುದ್ರಾಕ್ಷಿ ಸರವನ್ನು ಧರಿಸಿ, ಮೇಲೆ ಸತ್ತಿಗೆಯನ್ನು ಹಿಡಿದು ಕಲ್ಯಾಣದ ಬೀದಿ ಬೀದಿ ಯಲ್ಲಿ ಮೆರವಣಿಗೆಯನ್ನು ಮಾಡುತ್ತಾರೆ.

"ಅತ್ತೂ ಮೂಲೆಯ ಅದಿನಾರು ಬೀದಿಯ
ಅಪ್ಪ ರೇವಣುನೋರು ಪಡೆದಾರು | ಭೂಚಕ್ರದ
ಸತ್ತೀಗೆ ನಮ್ಮ ಗುರುವಿಗಿಡಿದಾವ |"

ಇದು ಒಂದು ರೀತಿಯಲ್ಲಿ ಕುರುಬ ಜನಾಂಗದವರಿಗೆ ದೊರೆತ ನೈತಿಕ ವಿಜಯವಾಗಿದೆಯೆಂದು ಹೇಳಬಹುದು. ಇಂಥ ನೈತಿಕ ವಿಜಯವನ್ನು ತಂದು ಕೊಟ್ಟು ತಮ್ಮ ಆತ್ಮಗೌರವವನ್ನು ಕಾಪಾಡಿರುವುದ ಕ್ಕೋಸ್ಕರವಾಗಿಯೇ ಕುರುಬ ಜನಾಂಗದವರು ತಮ್ಮ ಕೇರಿ ಕೇರಿಗಳಲ್ಲಿ ರೇವಣಸ್ವಾಮಿಯ ಮಠಗಳನ್ನು ಕಟ್ಟಿಕೊಂಡು ತಮ್ಮ ಭಕ್ತಿಗೌರವಗಳನ್ನು ಸಮರ್ಪಿಸುತ್ತಾ ಬಂದಿದ್ದಾರೆ.

ಹೀಗೆ ಕುರುಬ ಜನಾಂಗದವರಿಗೆ ನೈತಿಕ ಜಯವನ್ನು ತಂದುಕೊಟ್ಟು ರೇವಣಸಿದ್ಧರು ಕಲ್ಯಾಣದ ಕ್ರಾಂತಿಯ ತರುವಾಯ ಕರ್ನಾಟಕ ದಕ್ಷಿಣ ಭಾಗಕ್ಕೆ ಬಂದರೆಂದು ತಿಳಿದು ಬರುತ್ತದೆ. ರೇವಣಸಿದ್ಧರ ಜೊತೆಗೆ ಸಿದ್ಧರಾಮ, ಮರುಳಸಿದ್ಧ, ರುದ್ರಮುನಿ, ಮಾಯದೇವಿ, ರೇವಕ್ಕರು ಬಂದಿದ್ದರು ಎಂಬುದಕ್ಕೆ ಚಿಕ್ಕಮಗಳೂರು, ತುಮಕೂರು, ಬೆಂಗಳೂರು, ಮೈಸೂರು, ಕೊಡಗು, ಹಾಸನ, ಚಿತ್ರದುರ್ಗ, ಧಾರವಾಡ, ಹುಬ್ಬಳ್ಳಿ, ಕೊಪ್ಪಳ, ರಾಯಚೂರು, ಗುಲಬರ್ಗಾ ಮುಂತಾದ ಜಿಲ್ಲೆಯಲ್ಲಿ ಇವರ ಹೆಸರಿನಲ್ಲಿರುವ ಅನೇಕ ದೇವಾಲಯಗಳನ್ನು ಸ್ಥಳ ಪುರಾಣಗಳು ಐತಿಹ್ಯಗಳು ಸಾಕ್ಷಿಯನ್ನು ನುಡಿಯುತ್ತವೆ.

**೨.೬.೨. ಸರವೂರ ಶಾಂತಮುತ್ತಯ್ಯ**

ಕುರುಬರ ಗುರುವರ್ಗದ ಪ್ರಾಚೀನ ಮಹಾಪುರುಷರಲ್ಲಿ ಸರವೂರ ಶಾಂತಮುತ್ತಯ್ಯನು ಒಬ್ಬ ಶ್ರೇಷ್ಠ ಸಾಧಕ ವ್ಯಕ್ತಿಯೆಂದು ಹೇಳಬಹುದು. ರೇವಣಸಿದ್ಧೇಶ್ವರನ ಅನುಯಾಯಿಯಾದ ಶಾಂತಮುತ್ತಯ್ಯ ನಿಗೆ ಕುರುಬ ಸಮಾಜದಲ್ಲಿ ವಿಶೇಷ ಗೌರವವಿದೆ. ಈತನನ್ನು ಶಾಂತಮುತ್ತಯ್ಯ, ಶಾಂತಿಮಯ್ಯ,

ಶಾಂತಯ್ಯ, ಶಾಂತೊಡೆಯ ಎಂದು ಕಾವ್ಯಗಳಲ್ಲಿ, ಶಾಸನಗಳಲ್ಲಿ ಕರೆಯಲ್ಪಟ್ಟಿದೆ. ಈತನು ರೇವಣಸಿದ್ಧೇಶ್ವರನ ಪರಮಭಕ್ತನಾಗಿದ್ದರಿಂದ ಕುರುಬರ ಗುರು ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾನೆ (ಡಾ. ಎಂ.ಎಂ. ಕಲಬುರ್ಗಿಯವರು, ಕುರುಬರ ಗುರು ಶಾಂತಮುತ್ತಯ್ಯ ಎಂದು ಮಾರ್ಗ ೪ರಲ್ಲಿ ಪುಟ ೩೭೭). ಕುರುಬರಲ್ಲಿ ರೇವಣಸಿದ್ಧೇಶ್ವರನಿಗೆ ಈಗಲೂ ಉನ್ನತವಾದ ಪೂಜ್ಯ ಭಾವನೆಯಿದೆ. ಈತ ತನ್ನ ನಂತರದಲ್ಲಿ ಗುರುಸ್ಥಾನವನ್ನು ಶಾಂತಮುತ್ತಯ್ಯನಿಗೆ ವಹಿಸಿದಂತಿದೆ. ಹಾಗೆಯೇ ಶ್ರೀಗುರು ರೇವಣಸಿದ್ಧರ ಜೊತೆಯಲ್ಲಿ ಈತನ ಹೆಸರು ಪ್ರಸ್ತಾಪಗೊಂಡಿರುವುದನ್ನು ಗಮನಿಸಿದರೆ, ಕುರುಬರ ಗುರುಗಳು ಹೇಳುವ ತಮ್ಮ ಬಿರುದಾವಳಿಗಳನ್ನು ಹೇಳುವಾಗಲೂ "ಶ್ರೀಮತಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ ಅಷ್ಟಾಂಗ ಯೋಗನಿಷ್ಠ ಗರಿಷ್ಠ ಆಶ್ರಮ ಚತುಷ್ಟೆಯಕ್ಕೊಡೆಯ ಕುರುಕುಲ ಸ್ಥಾಪಕನಾಚಾರ್ಯ ಶ್ರೀ ಮನಮಹಾರೇಣುಕಾಚಾರ್ಯ ವಂಶೋದ್ಭವ ಅನೇಕ ಬಿರುದಾವಳಿಗಳಿಂದ ವಿಭೂಷಿತರಾದ ಕುರುಬ ಜಗದ್ಗುರು ಸಾಕ್ಷಾತ ಸರವೂರು ಸಿಂಹಾಸನಾಧಿಪತಿ ಶಾಂತಭಿಕ್ಷಾವರ್ತಿ ಶ್ರೀ ಶ್ರೀ ಶಾಂತಮುತ್ತಯ್ಯ ಒಡೆಯಾನ್ವಯರ ಶಾಖಾನುವರ್ತಿಗಳಾದ ಅಣತಿ ಮಠದ ಶ್ರೀ ಸಿಂಹಾಸನಾಧಿಕಾರಿಗಳಾದ ಶ್ರೀ ಶ್ರೀ ಗುರುಸಿದ್ಧಪ್ಪ ಒಡೆಯರ ಸನ್ನಿಧಿಯಿಂದ" ಎಂದು ಶಾಂತಮುತ್ತಯ್ಯನವರನ್ನು ಗುರುಬರ ಜಗದ್ಗುರು ಸಾಕ್ಷಾತ ಸರವೂರು ಸಿಂಹಾಸನಾಧಿಪತಿ ಶ್ರೀಮನ ರೇಣುಕಾಚಾರ್ಯರ ವಂಶೋದ್ಭವ ಎಂದು ಕೀರ್ತಿತನಾಗಿರುವುದನ್ನು ನೋಡಿದರೆ ಕುರುಬರ ಕುರುವರ್ಗದಲ್ಲಿ ಈತನೊಬ್ಬ ಅಸಾಮಾನ್ಯ ವ್ಯಕ್ತಿಯೆಂದು ತೋರುತ್ತದೆ. ಈತನ ಅಸಾಮಾನ್ಯ ವ್ಯಕ್ತಿತ್ವವನ್ನು ಕ್ರಿ.ಶ. ೧೧೭೪ರ ಸಿರವಾಳ ಶಾಸನವೂ ಹೀಗೆ ಕೊಂಡಾಡುತ್ತದೆ. "ಶಿವಯೋಗಿ ಶಾ(ನ್ತಿ)ಮಯ್ಯಂಗಳ ಮಹಿಮೆಯೆಂತೆನೆ ॥ ಕ್ರಿತಯುಗ ತ್ರೇತೆ ಮೂಜೆನೆಯೆ ದ್ವಾಪರದೊಳು ನೆಗಳ್ದ ಭೂತೋತ್ಕರ್ವರ್ಬ್ಬ(ಟಿ)ತಿತ ಬ್ರತಾನುಕಾರಿಗಳು ದಿವ್ಯ ಸಹಶ್ರ (ಸ್ರ) ಶತಾನುಮಬ್ದ ಕಿಂಕರನು ಹರಯಿಬಳಿ ಕವಾತೆಸೆದೀವನದಂತೆನೆ ಶಾನ್ತಿಮಯ್ಯ ತತುಕ್ಷಣದೊಳೆ ಭಕ್ತಿಯ ಪಡೆದನೇಂ. ಕಲವೀರನೋ ವೀರಭದ್ರನೋ ॥ ಶ್ರೀಮದಣಿಮಾದ್ಯಷ್ಟಗುಣ ಸಂಪನರುಂ ತತ್ವಜ್ಞಾನ ಪ್ರಸನ್ನರುಂ ಷಡಂಗಯೋಗಸಂಗದರುಂ ಶಿವಯೋಗಿ ಶಾನ್ತಿಮಯಂಗಳ ಪುತ್ರ ರೇವಣಸಸಾರಭ್ಯಸಂನಿಸಂಗರುಮಪ್ಪ ದೇವಯ್ಯಂಗಳ ಪ್ರಸಿದ್ಧತಿಗೆಯೆಂತೆನೆ"[೮] ಎಂದು ಶಾಂತಿಮಯ ಮುತ್ತಯ್ಯನನ್ನು ಅಣಿಮಾದ್ಯಷ್ಟಗುಣ ಸಂಪನ್ನನೆಂದು, ತತ್ವಜ್ಞಾನ ಪ್ರಸನ್ನರು ಎಂದು ತತ್‌ಕ್ಷಣದಲ್ಲಿಯೇ ಭಕ್ತಿಯನ್ನು ಪಡೆದ ಕಲಿವೀರನೋ, ವೀರಭದ್ರನೋ ಎಂದು ವರ್ಣಿಸಿರುವುದನ್ನು ಮತ್ತು ಅವನನ್ನು 'ಶಿವಯೋಗಿ' ಎಂದು ಮೂರು ಬಾರಿ ಸಂಬೋಧಿಸಿರುವುದನ್ನು ನೋಡಿದರೆ ಕುರುಬರ ಗುರುವರ್ಗದ ಮಹಾಪುರುಷರಲ್ಲಿ ಇವನೊಬ್ಬ ಮಹಿಮಾತಿಶಯ ವ್ಯಕ್ತಿತ್ವವನ್ನು ಹೊಂದಿದ್ದವನು ಎಂಬುದು ಸ್ಪಷ್ಟವಾಗುತ್ತದೆ.

ಶಿವಪೂಜೆಯಲ್ಲಿ ಅಚಲನಿಷ್ಠನಾಗಿದ್ದ ಶಾಂತಯ್ಯನ ಭಕ್ತಿಗೆ ಮೆಚ್ಚಿದ ಶಿವ ರೇವಣಸಿದ್ಧ ಮರುಳಸಿದ್ಧ ಏಕೋರಾಮ, ಪಂಡಿತಾರಾಧ್ಯರ ಸಮಕ್ಷಮದಲ್ಲಿ ದೀಕ್ಷೆ ನೀಡುತ್ತಾನೆ. ಆಗ ಕೈಲಾಸದಿಂದ ಕರಿಮಲ್ಲಿಗೆ ಸರಸರ ಸುರಿದುದರಿಂದ ಆ ಸ್ಥಳ 'ಸರೂರು' ಎಂಬ ನಾಮದಿಂದ ಪ್ರಸಿದ್ಧಿ ಪಡೆಯುತ್ತದೆ. ಆಗ ಶಿವನು "ಶಿರಿವಂತೆಯ ಮಕ್ಕಳು ಉಣ್ಣೆ ಕಂಕಣದವರು, ಲಿಂಗಮ್ಮನ ಮಕ್ಕಳು ಹತ್ತಿಕಂಕಣದವರು ಎಂದು ಅಕ್ಕ ತಂಗಿಯರ ವಂಶಕ್ಕೆ ನಾಮವನ್ನು ಇಡುತ್ತಾನೆ. ಶಾಂತಯ್ಯನಿಗೆ ಎರಡೂ ಪಂಗಡಕ್ಕೂ ಗುರುವಾಗು" ಎಂದು ಹರಸುತ್ತಾನೆ.

ಹೀಗೆ ಕುರುಬ ಕುಲದಲ್ಲಿ ಉದಿಸಿದ ಶಾಂತಮುತ್ತಯ್ಯ ತನ್ನ ಭಕ್ತಿಯಿಂದ ಶಿವನ ಒಲುಮೆಯನ್ನು ಪಡೆದವನು. ತನ್ನ ಜನಾಂಗದವರಿಗೆ ಅನ್ಯಾಯವಾದಾಗ ಪವಾಡವನ್ನು ಮೆರೆದು ಸಕಲ ಶರಣರಿಂದ ಮೆಚ್ಚುಗೆಯನ್ನು ಪಡೆಯುತ್ತಾನೆ. ಕುರುಬ ಕುಲದವರನ್ನು ಮರಳಿ ಕಲ್ಯಾಣ ಪಟ್ಟಣದೊಳಗೆ ಪ್ರವೇಶ ಮಾಡುವಂತೆ ಮಾಡುತ್ತಾನೆ. ಇದು ಈತನ ಮಹತ್ವ ಸಾಧನೆಯ ಕಾರ್ಯವಾಗಿದೆ. ಈ ಕಲ್ಯಾಣದಲ್ಲಿ ಬಸವಾದಿ ಪ್ರಥಮರ ಸಮ್ಮುಖದಲ್ಲಿ ಪವಾಡ ಮೆರೆದ ಸಂಗತಿಯನ್ನು ತುರುವೆಕೆರೆ ತಾಮ್ರಶಾಸನವು ಕೂಡ ಹೇಳುತ್ತದೆ. ಹೀಗೆ ಪವಾಡ ಮೆರೆದು ಬಸವಣ್ಣನವರಿಂದ ಕುರುಬ ಕುಲದ ಗುರುತನವನ್ನು ಪಡೆದ ಕುರುಬರ ಪ್ರಥಮ ಜಗದ್ಗುರು ಆಗಿರುವುದರಿಂದಲೇ ಅವನನ್ನು ಕುರುಬರು ಮತ್ತು ಗುರು ಪರಂಪರೆಯ ಒಡೆಯರುಗಳು ಗೌರವದಿಂದ ನೆನೆಯುತ್ತಿರುವುದು ಕಂಡು ಬರುತ್ತದೆ.

**೨.೬.೩. ಶಾಂತವಡೆಯರು**

ಕುರುಬರ ಗುರುವರ್ಗದವರಾದ ಇವರನ್ನು ಒಡೆಯರು, ಒಡೇರು, ಒಡೇರಯ್ನೋರು, ಅಯ್ನೋರು, ಗುರುವಿನವರು, ಗುರುಗಳು, ಮಾರಾಯಗೋಳು ಎಂದು ಮುಂತಾಗಿ ಕರೆಯುತ್ತಿರುವುದು ಕಂಡು ಬರುತ್ತದೆ. ಈ ಎಲ್ಲಾ ಪದಗಳು ಅವರು ಪುರೋಹಿತವರ್ಗದವರು ಎಂಬುದನ್ನು ಸೂಚಿಸುತ್ತವೆ. 'ಒಡೆಯ' ಎಂದರೆ ಸಾಮಾನ್ಯವಾಗಿ ನಾಯಕ, ಯಜಮಾನ, ಮುಖ್ಯಸ್ಥ, ಸ್ವಾಮಿ, ಮುಂದಾಳು, ಅರಸ ಎಂದು ಕನ್ನಡ ನಿಘಂಟುಗಳಲ್ಲಿ ಹೇಳಲಾಗಿದೆ. ಪ್ರಸ್ತುತ ಇಲ್ಲಿ ಒಡೆಯ ಎಂದರೆ ಸ್ವಾಮಿ, ಧಾರ್ಮಿಕ ಮುಖಂಡ ಮುಖ್ಯಸ್ಥ ಎನ್ನುವ ಪರಿಕಲ್ಪನೆಯಲ್ಲಿ ಬಳಕೆ ಆಗುತ್ತದೆ ಎಂದು ಹೇಳಬಹುದು. ಇವರು ಅನನ್ಯತೆಗಾಗಿ ತಮ್ಮ ಹೆಸರುಗಳ ಕೊನೆಯಲ್ಲಿ 'ಒಡೆಯರು' ಎಂದು ಸೇರಿಸಿಕೊಳ್ಳುತ್ತಾರೆ.

ಉದಾ:- ಶಾಂತಯ್ಯ ಒಡೆಯರ, ಸಿದ್ಧಯ್ಯ ಒಡೆಯರ, ರೇವಯ್ಯ ಒಡೆಯರ ಇತ್ಯಾದಿ, ಒಡೆಯರ ಪದದ ಹಿಂದಿನ 'ಅಯ್ಯ' ಎಂಬುದು ಕೂಡ ಅವರು ಗುರುವರ್ಗಕ್ಕೆ ಸೇರಿದವರು ಎಂಬುದರ ಸೂಚನೆಯಾಗಿದೆ. ವೀರಶೈವ ಜಂಗಮರು ಸಾಮಾನ್ಯವಾಗಿ 'ಅಯ್ಯ' ಎಂದು ಕೊನೆಯಾಗುವ ಹೆಸರನ್ನು ಇಟ್ಟುಕೊಳ್ಳುತ್ತಾರೆ. ಅಯ್ಯಾಚಾರ (ಅಯ್ಯ+ಆಚಾರ) ಎಂದರೆ ಪುರೋಹಿತರು ನಡೆಸುವ ಪೌರೋಹಿತ್ಯ ಎಂದು ಹೇಳಲಾಗುತ್ತದೆ.[೯] ಕುರುಬರ ಮೂಲ ಗುರುವಾದ ರೇವಣಸಿದ್ಧೇಶ್ವರನ ಕೃಪೆಗೆ ಪಾತ್ರರಾದ ಅನುಯಾಯಿಗಳಿಗೆ 'ಒಡೆಯರ' ಎಂದು ಕರೆಯಲಾಯಿತು. ರೇವಣಸಿದ್ಧೇಶ್ವರ ಇವರಿಗೆ ಲಿಂಗದೀಕ್ಷೆಯನ್ನು ನೀಡಿ ಕುರುಬ ಕುಲಕ್ಕೆ ಒಡೆಯರಾಗಿರಿ ಎಂದು ಹರಸಿದಂದಿನಿಂದ ಇವರು ಕುರುಬ ಕುಲದ ಗುರುಗಳಾಗಿ ಕಾರ್ಯನಿರ್ವಹಿಸುತ್ತ ಬಂದಿದ್ದಾರೆ. ರೇವಣಸಿದ್ಧೇಶ್ವರನ ಶಿಷ್ಯ ಶಾಂತಮುತ್ತಯ್ಯ ಈತನ ಅನುಯಾಯಿಗಳನ್ನು 'ಶಾಂತೊಡೆಯರು' ಎಂದು ಕರೆಯುತ್ತಾರೆ. ಕುರುಬರ ಗುರುಪರಂಪರೆಯ ಒಡೆಯರುಗಳಲ್ಲಿ ಪ್ರಮುಖರಾದವರು ರೇವಣಸಿದ್ಧೇಶ್ವರ ಸಂಪ್ರದಾಯದ ಒಡೆಯರು. ಏಕೆಂದರೆ ಕರ್ನಾಟಕದಾದ್ಯಂತ ಹರಡಿ ಕೊಂಡಿರುವ ರೇವಣಸಿದ್ಧೇಶ್ವರ ದೇವಾಲಯಗಳು, ಮಠಗಳು ಇದಕ್ಕೆ ನಿದರ್ಶನಗಳಾಗಿವೆ. ಸಾಮಾನ್ಯವಾಗಿ ರೇವಣಸಿದ್ಧೇಶ್ವರ ದೇವಾಲಯಗಳ ಪೂಜಾರಿಗಳಾಗಿಯೂ, ಮಠಗಳ ಪೀಠಾಧಿಪತಿಗಳಾಗಿಯೂ ಹಾಲುಮತ

ಸಮಾಜದ ಕುಲಗುರುಗಳಾಗಿಯೂ ಇವರು ಕಾರ್ಯವನ್ನು ನಿರ್ವಹಿಸುತ್ತಾರೆ. ರೇವಣಸಿದ್ಧ ಸಂಪ್ರದಾಯ ಒಡೆಯರನ್ನು ಶಾಂತೊಡೆಯರೆಂದೂ ಕರೆಯುತ್ತಾರೆ. ಅದಕ್ಕೆ ಕಾರಣವನ್ನು ಒಡೆಯರು ಹೀಗೆ ಹೇಳುತ್ತಾರೆ. "ನಮ್ಮ ಮೂಲ ಪುರುಷ ಸರೂರು ಶಾಂತಮುತ್ತಯ್ಯನವರು, ಅವರು ಅಡವಿಯಲ್ಲಿ ಕುರಿಯ ಹಿಂಡನ್ನು ಮೇಯಿಸುತ್ತಲಿರುವಾಗ ಶ್ರೀ ಗುರು ರೇವಣಸಿದ್ಧರು ಅವರಿಗೆ ದರ್ಶನವನ್ನು ನೀಡಿ, ಲಿಂಗದೀಕ್ಷೆಯನ್ನಿತ್ತು ಕುರುಬ ಕುಲಕ್ಕೆ, ಗುರುಗಳನ್ನಾಗಿ ನೇಮಿಸಿದರು. ಶಾಂತಯ್ಯನ ಸಂತತಿಯವರಾದ ನಾವು ಈ ಗುರುಪರಂಪರೆ ಯನ್ನು ಮುಂದುವರೆಸಿಕೊಂಡು ಬಂದಿರುವುದರಿಂದ 'ಶಾಂತೊಡೆಯರು' ಎಂದು ಕರೆಯುತ್ತಾರೆ. ರೇವಣಸಿದ್ಧೇಶ್ವರರು ಶಾಂತಮುತ್ತಯ್ಯನವರಿಗೆ ಲಿಂಗದೀಕ್ಷೆಯನ್ನು ಕೊಟ್ಟು, ಕುರುಬ ಕುಲಕ್ಕೆ ಗುರುಗಳನ್ನಾಗಿ ಮಾಡಿರುವುದರ ಕುರುಹಾಗಿ ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮದ ಊರ ಹೊರ ಪ್ರದೇಶದ ಬಯಲಿನಲ್ಲಿ ರೇವಣಸಿದ್ಧೇಶ್ವರ ದೇವಾಲಯವಿದೆ. ಈ ದೇವಾಲಯದ ಎಡಗಡೆಗೆ ಕಲ್ಲು ಬಂಡೆಗಳಿಂದಾವೃತವಾದ ಬೆಟ್ಟಗುಡ್ಡದಲ್ಲಿ ಶಾಂತಮುತ್ತಯ್ಯನವರ ಗದ್ದುಗೆ ಇರುವುದನ್ನು ಈಗಲೂ ಕಾಣಬಹುದಾಗಿದೆ. ಈ ದೇವಾಲಯ ಹಾಗೂ ಗದ್ದುಗೆಯ ಅರ್ಚಕರು ಕುರುಬರ ಗುರುವರ್ಗದವರು, ಶಾಂತಯ್ಯನ ಸಂತತಿಯವರು ತಾವೆಂದು ಹೇಳಿಕೊಳ್ಳುತ್ತಾರೆ. ಇವರು ಶಾಂತಮುತ್ತಯ್ಯನವರು ಅನೇಕ ಪವಾಡಗಳನ್ನು ಮಾಡಿ ಸಮಾಧಿಯನ್ನು ಹೊಂದಿರುವುದು ಇದೇ ಸ್ಥಳದಲ್ಲಿಯೆಂದು ಈ ಗದ್ದುಗೆಯನ್ನು ತೋರಿಸುತ್ತಾರೆ. ಇದಕ್ಕೆ ಪೂರಕವೆಂಬಂತೆ 'ಹಾಲ್ಮತೋತ್ತೇಜಕ ಪುರಾಣ' ಮತ್ತು 'ತಗರ ಪವಾಡ' ಕೃತಿಗಳು ಶಾಂತಮುತ್ತಯ್ಯನವರನ್ನು ಕುರಿತು ಅಪೂರ್ವವಾದ ಮಾಹಿತಿಯನ್ನು ಒದಗಿಸುತ್ತವೆ. ಮಹಾನ್ ಶಿವಭಕ್ತನೂ ಸಿದ್ಧಪುರುಷನೂ ಆದ ಶಾಂತಮುತ್ತಯ್ಯನು ಸರೂರು ಸೀಮೆಯಲ್ಲಿ ಕುರಿಯ ಹಿಂಡನ್ನು ಮೇಯಿಸುತ್ತಲಿರುವಾಗ ರೇವಣಸಿದ್ಧರು ದರ್ಶನವನ್ನು ನೀಡಿ ಲಿಂಗದೀಕ್ಷೆಯನ್ನು ಕೊಟ್ಟು ಗುರುಕಂಕಣವನ್ನು ಕಟ್ಟಿ ಹಾಲುಮತ ಕುಲಕ್ಕೆ ಅಧ್ಯಕ್ಷನನ್ನಾಗಿ ಮಾಡಿದ ಸಂಗತಿಯನ್ನು 'ಹಾಲ್ಮತೋತ್ತೇಜಕ ಪುರಾಣ'ವು ಹೇಳುತ್ತದೆ. "ತಗರ ಪವಾಡವು, ರೇವಣಸಿದ್ಧರು, ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆ ನೀಡಿರುವುದರ ಜೊತೆಗೆ ಕಲ್ಯಾಣ ಪಟ್ಟಣದಲ್ಲಿ ಕುರುಬರು ಹಾಲು ಕಂಬಿಯ ಮೇಲೆ ಸತ್ತ ಕುರಿಯನ್ನು ಹೊತ್ತು ಮಾರಿದ ಪ್ರಮಾದಕ್ಕೆ ೧೨ ವರ್ಷ ಪಟ್ಟಣದಿಂದ ಬಹಿಷ್ಕಾರಕ್ಕೆ ಒಳಗಾಗಿರುವ ಸಂಗತಿಗಳನ್ನು ಹೀಗೆ ಬಹಿಷ್ಕಾರಕ್ಕೆ, ಒಳಗಾಗಿರುವ ಕುರುಬರನ್ನು ಶಾಂತಮುತ್ತಯ್ಯನು ಬಿಜ್ಜಳ ಬಸವಾದಿ ಶರಣರ ಸಮುಖದಲ್ಲಿ ಸತ್ತಿರುವ ಕಿನ್ನರಯ್ಯನ ತಗರವನ್ನು ಬದುಕಿಸಿ ತಗರ ಪವಾಡವನ್ನು ಮೆರೆದು ಹೊರ ಹಾಕಲ್ಪಟ್ಟಿರುವ ಕುರುಬರನ್ನು ಮತ್ತೆ ಕಲ್ಯಾಣ ಪಟ್ಟಣದ ಒಳಗೆ ಬರುವಂತೆ ಮಾಡಿ, ಬಸವಣ್ಣನವರಿಂದ ಕುರುಬ ಕುಲದ ಗುರುತನದ ಕುರುಹಾಗಿ ಮೂರೇಣಿನ ಕಂಥೆಯನ್ನು (೭-೪೫) ಪಡೆದುಕೊಂಡ ಐತಿಹಾಸಿಕ ಸಂಗತಿ ಗಳನ್ನು ದಾಖಲಿಸುತ್ತದೆ. ಹೀಗೆ ಪವಾಡ ಮೆರೆದ ಶಾಂತಮುತ್ತಯ್ಯನಿಗೆ ಸಂಬಂಧಿಸಿದಂತೆ 'ಸಿರವಾಳ (೧೧೭೦-೧೧೭೮), ಕೆಲ್ಲೂರು (೧೧೭೫), ಹೋತಗಲ್ಲ (೧೧೭೫), ಹಿರೇಬೇವಿನೂರು (೧೯೯೦), ತುರುವೇ ಕೆರೆ (೧೪೮೦). ಹೀಗೆ ಒಟ್ಟು ಆರು ಶಾಸನಗಳು ದೊರೆಯುತ್ತವೆ. ಈ ಶಾಸನಗಳಲ್ಲಿ ಶಾಂತಿಮಯ್ಯ,

ಶಾಂತಮಯಮುತ್ತಯ್ಯ, ಶಾಂತಯ್ಯ ಎಂದು ಕರೆಯಲ್ಪಟ್ಟಿರುವುದು ಕಂಡು ಬರುತ್ತದೆ. ಅಲ್ಲದೆ ಇವನನ್ನು ಶಿವಯೋಗಿಯೆಂದೂ, ತತಕ್ಷಣದಲ್ಲಿಯೇ ಭಕ್ತಿಯನ್ನು ಗಳಿಸಿದವನೆಂದೂ, ಅಣಿಮಾದ್ಯಷ್ಟಗುಣ ಸಂಪನ್ನನೆಂದೂ, ಷಡಂಗ ಯೋಗಸಂಗತನೆಂದು ಕರೆದಿರುವುದನ್ನು ನೋಡಿದರೆ ಈತನೊಬ್ಬ ಮಹಾಪುರುಷನೆಂಬುದರಲ್ಲಿ ಸಂಶಯವಿಲ್ಲವೆನಿಸುತ್ತದೆ.'[೨೮] ಹಾಗಾಗಿ ಈತನನ್ನು ತಾಂತ್ರಿಕ ಪಥದ ನಾಯಕನೆಂದು ಒಪ್ಪಿಕೊಳ್ಳಬಹುದು.

ರೇವಣಸಿದ್ಧರಿಂದ ಲಿಂಗದೀಕ್ಷೆಯನ್ನು ಪಡೆದುಕೊಂಡು ಕುರುಬ ಕುಲಕ್ಕೆ ಅಧ್ಯಕ್ಷನಾಗಿರುವ ನಂತರ ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳ ಬಸವಾದಿ ಶರಣರ ಸಮ್ಮುಖದಲ್ಲಿ ಸತ್ತಿರುವ ತಗರವೊಂದನ್ನು ಬದುಕಿಸಿ, ಪವಾಡಗೈದು, ಕಲ್ಯಾಣ ಪಟ್ಟಣದಿಂದ ಹನ್ನೆರಡು ವರ್ಷ ಹೊರ ಹಾಕಲ್ಪಟ್ಟಿರುವ ಕುರುಬರನ್ನು ಮತ್ತೆ ಕಲ್ಯಾಣ ಪಟ್ಟಣದೊಳಗೆ ಬರುವಂತೆ ಮಾಡಿರುವುದು, ಅದರ ಕುರುಹೆಂಬಂತೆ ಬಸವಣ್ಣನವರಿಂದ "ಮೂರೇಣಿನ ಕಂಥೆ"ಯನ್ನು ಪಡೆದುಕೊಂಡಿರುವ ಕಥಾ ಸಂಗತಿಗಳು ಶಾಂತಮುತ್ತಯ್ಯನ ಜೀವನದ ಸುತ್ತ ಹೆಣೆದುಕೊಂಡಿರುವ ಪ್ರಮುಖ ಸಂಗತಿಗಳಾಗಿವೆ. ಈಗಲೂ ಒಡೆಯರು ಮೂರೇಣಿನ ಕಂಥೆಯನ್ನು ಬಳಸುತ್ತಾರೆ. ಈ ಕಂಬಳಿಯೇ ಅವರ ಸಾಂಸ್ಕೃತಿಕ ಅನನ್ಯತೆಯಾಗಿ ಬಳಕೆಯಾಗುತ್ತದೆ. ಕ್ರಿ.ಶ.ಸು. ೧೧ನೆಯ ಶತಮಾನದ ಮಧ್ಯರ್ಧದಿಂದ ೧೨ನೆಯ ಶತಮಾನದ ಮಧ್ಯಾವಧಿಯವರೆಗೆ ಜೀವಿಸಿರಬಹುದೆಂದು ಹೇಳಬಹುದಾಗಿದೆ. ಏಕೆಂದರೆ ಕ್ರಿ.ಶ. ೧೧೭೦ರ ಶಿರವಾಳ ಶಾಸನದ ಕಾಲಕ್ಕಾಗಲೇ ಶಾಂತಮುತ್ತಯ್ಯ ನಿಧನ ಹೊಂದಿ, ಶಿರಿವಾಳದಲ್ಲಿ ಸಿದ್ಧಸಾಂತೇಶ್ವರ ಹೆಸರಿನ ದೇವರೆಂದು ಪೂಜೆಗೊಳ್ಳುತ್ತಿರುವುದು ಸ್ಪಷ್ಟವಾಗಿದೆ.[೨೯] ಹೀಗಾಗಿ ೧೨ನೆಯ ಶತಮಾನದ ಮಧ್ಯ ಭಾಗದಿಂದಲೇ ರೇವಣಸಿದ್ಧ ಸಂಪ್ರದಾಯದ ಅಥವಾ 'ಶಾಂತೊಡೆಯ ಪರಂಪರೆಯು ಆರಂಭವಾಗಿರಬಹುದೆಂದು' ಹೇಳಬಹುದಾಗಿದೆ. ರೇವಣಸಿದ್ಧನ ಶಿಷ್ಯನೂ ಮಹಿಮಾಪುರುಷನೂ ಆಗಿರುವ ಶಾಂತಮುತ್ತಯ್ಯನವರಿಗೆ ಕುರುಬರ ಗುರುಪರಂಪರೆಯಲ್ಲಿ ಪ್ರಮುಖವಾದ ಸ್ಥಾನವಿರುವುದು ಕಂಡು ಬರುತ್ತದೆ. ಆದ್ದರಿಂದ ಈ ಶಾಂತಮುತ್ತಯ್ಯನೇ ಕುರುಬರ ಗುರುಪರಂಪರೆಯ ಮೂಲಪುರುಷನೆಂದೂ, ಸರೂರು ಕುರುಬರ ಮೂಲ ಗುರುಪೀಠವೆಂದು ಸ್ಪಷ್ಟವಾಗಿ ಗುರುತಿಸಬಹುದು.

ಶಾಂತಮುತ್ತಯ್ಯನ ತರುವಾಯ ಆತನ ವಂಶಜರು ಕುರುಬ ಕುಲದವರಿಗೆ ಕುಲಗುರುಗಳಾಗಿ ಈ ಗುರುಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

### ೨.೭. ನೆಲೆಗಳು

#### ೨.೭.೧. ಸರೂರ

ರೇವಣಸಿದ್ಧ ಸಂಪ್ರದಾಯದ ಒಡೆಯರ ನೆಲೆಗಳಲ್ಲಿ ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮವು ತುಂಬಾ ಪ್ರಮುಖವಾದುದಾಗಿದೆ. "ಹಾಲುಮತ ಸಂಸ್ಥಾಪಕ ಶ್ರೀ ರೇವಣ ಸಿದ್ಧೇಶ್ವರ ಮೂಲ ಪೀಠವು" ಇರುವುದು ಈ ಊರಿನಲ್ಲಿಯೇ. ರೇವಣಸಿದ್ಧರು ಶಿವಭಕ್ತನಾದ ಕುರುಬ

ಶಾಂತಮುತ್ತಯ್ಯನಿಗೆ ದೀಕ್ಷೆಯನ್ನು ದಯಪಾಲಿಸಿ, ಗುರುಕಂಕಣವನ್ನು ಕಟ್ಟಿ ಕುರುಬ ಕುಲಕ್ಕೆ ಅಧ್ಯಕ್ಷ (ಒಡೆಯ)ನನ್ನಾಗಿ ಮಾಡಿರುವುದು ಇಲ್ಲಿಯೇ ಎಂಬ ಪ್ರತೀತಿಯು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶದ ರೇವಣಸಿದ್ಧ ಮಠಗಳಲ್ಲಿ ಕೇಳಿ ಬರುತ್ತಿದೆ. ರೇವಣಸಿದ್ಧರು ಶಾಂತಮುತ್ತಯ್ಯನಿಗೆ ದೀಕ್ಷೆಯನ್ನು ಕೊಡುವ ಸಂದರ್ಭದಲ್ಲಿ ಕೈಲಾಸದಿಂದ ಕರಿಮಲ್ಲಿಗೆಯ ಸರ ಸುರಿದಿರುವುದರಿಂದ ಈ ಊರಿಗೆ 'ಸರವೂರ' ಎಂಬ ಹೆಸರು ಬರಲು ಕಾರಣವಾಯಿತೆಂದು ಇಲ್ಲಿಯ ಸ್ಥಳಪುರಾಣಗಳು ಹೇಳುತ್ತವೆ. ಬಾದಾಮಿ ತಾಲೂಕಿನ ಚಿಕ್ಕನಸಬಿ, ಚಳ್ಳಕೆರೆ ತಾಲೂಕಿನ ದೊಡ್ಡೇರಿ, ಚಿತ್ರದುರ್ಗ ಜಿಲ್ಲೆಯ 'ಸೊಲ್ಲಾಪುರ' ಗ್ರಾಮದ ರೇವಣಸಿದ್ಧ ಮಠಗಳಲ್ಲಿ ಈ ಕಥನಗಳು ಪ್ರಚಲಿತದಲ್ಲಿವೆ. ಇದಕ್ಕೆ ಪೂರಕವೆಂಬಂತೆ ಈ ಸರೂರಿನ ಹೊರಬಯಲಿನಲ್ಲಿ ಪ್ರಾಚೀನವಾದ ಪಂಚಕೂಟ ರೇವಣಸಿದ್ಧೇಶ್ವರ ದೇವಾಲಯವು ಇದೆ. ಈ ದೇವಾಲಯದ ಪಕ್ಕದಲ್ಲಿ ಬಂಡೆಗಳಿಂದಾವೃತ್ತವಾದ ಗುಡ್ಡದಲ್ಲಿ ಶಾಂತಮುತ್ತಯ್ಯನ ಗುದ್ದುಗೆಯು ಇರುವುದು. ಜೊತೆಗೆ ಊರಲ್ಲಿಯೂ ಒಂದು ಆಧುನಿಕ ಶೈಲಿಯಲ್ಲಿ ನಿರ್ಮಿಸಿದ ರೇವಣಸಿದ್ಧೇಶ್ವರ ದೇವಾಲಯವು ಇದೆ. ಈ ದೇವಾಲಯವನ್ನು ಇತ್ತೀಚಿಗೆ ನವೀಕರಿಸಲಾಗಿದೆ. ಈ ಸ್ಥಳದಲ್ಲಿ ಬಹಳ ಪುರಾತನ ದೇವಾಲಯವು ಇತ್ತೆಂದು ಗ್ರಾಮದ ಹಿರಿಯರು ಹೇಳುತ್ತಾರೆ. ಹಾಗೂ ಈ ಸರವೂರಿನ ಹತ್ತಿರದಲ್ಲಿಯೇ 'ತೂಗುಡ್ಡವು' ಇದೆ. ಇಲ್ಲಿಯೇ ಮಂಕಸಿದ್ಧನು ತಪಸ್ಸು ಮಾಡಿರುವುದು ಎಂದು ಇಲ್ಲಿಯ ಜನರು ಹೇಳುತ್ತಾರೆ. ಅದೂ ಅಲ್ಲದೆ ಸರೂರಿನಲ್ಲಿರುವ ಮಲ್ಲಿಕಾರ್ಜುನ ದೇವಾಲಯದ (ಈಗ ಅದನ್ನು ರೇವಣಸಿದ್ಧೇಶ್ವರ ದೇವಾಲಯ ವೆಂದು ಕರೆಯುತ್ತಾರೆ) ಆವರಣದಲ್ಲಿ ಕ್ರಿ.ಶ. ೧೨೦೮ ಮತ್ತು ೧೨೧೦ನೆಯ ಕಾಲದ ಎರಡು ಶಾಸನಗಳು ಇವೆ. ಅವುಗಳಲ್ಲಿ ಒಂದನೆಯ ಶಾಸನದಲ್ಲಿರುವ "ಮಂಕಯಂಗಳಿಗೆ ಮಲ್ಲಿನಾಥರಾಮವೆಂಬವನು ಸಂನಿದಾನ ದಲು" ಎಂಬ ವಾಕ್ಯ ಎರಡನೆಯ ಶಾಸನದಲ್ಲಿರುವ "ಅರಸನಹಳ್ಳಿಯ ವೀರನಗೌಡರ ಕೈಯಲು ಮಂಕೆ ಯನು ಹೊಂನ ಕೊಟ್ಟು ಆ ಹೊಲದಲು ಮತ್ತು ಹೊನಗುಂದದ ಬೀಚಗುರು ತಂನಮಗೆ ಮಂಕೆಯನ ಕಾಲದ ಗುರುವಿಗೆ ಮಂಕಯ್ಯನು ಮಲ್ಲಿನಾಥ ದೇವರ ಸ್ಥಾನದ ದಾರಾಪೂರ್ವಕ ಮಾಡಿಕೊಟ್ಟರು" ಎಂಬ ವಾಕ್ಯಗಳು ಕಾವ್ಯೋಕ್ತ ಮಂಕಯ್ಯನೇ ಎಂಬುದನ್ನು ಬಲಪಡಿಸುತ್ತವೆ.[೨] ಅದೇ ರೀತಿ ಶಾಂತ ಮುತ್ತಯ್ಯನ ಗದ್ದುಗೆಯನ್ನು ಪೂಜೆ ಮಾಡುವವರು. ಕುರುಬರ ಗುರುವರ್ಗಕ್ಕೆ ಸೇರಿದ ಪೂಜಾರಿಗಳು. ಇವರು ತಾವು ಶಾಂತಮುತ್ತಯ್ಯನ ಸಂತತಿಯವರೆಂದು ಹೇಳಿಕೊಳ್ಳುತ್ತಾರೆ. ಶಾಂತಮುತ್ತಯ್ಯನ ವಂಶಜ ರೆಂದು ಹೇಳಿಕೊಳ್ಳುವ ಗುರುವರ್ಗದವರ ಸುಮಾರು ೪೫ ಮನೆತಗಳು ಈ ಊರಿನಲ್ಲಿ ಇರುವುದು ಕಂಡುಬರುತ್ತದೆ.

ಈ ಊರಿನಲ್ಲಿ ವಿಶೇಷವಾಗಿ ಮಹಾಶಿವರಾತ್ರಿಯ ಸಂದರ್ಭದಲ್ಲಿ ಏಳು ಗುಡಿಯ ರೇವಣಸಿದ್ಧೇಶ್ವರ ಜಾತ್ರೆಯು ನಡೆಯುತ್ತದೆ. ಆ ಸಂದರ್ಭದಲ್ಲಿ ಶಾಂತಮುತ್ತಯ್ಯನ ಗದ್ದುಗೆ ಇರುವ ಗುಡ್ಡದಲ್ಲಿ ರೇವಣ ಸಿದ್ಧನ ಹೇಳಿಕೆಯನ್ನು ಮಾಡುವವರು ಕುರುಬರ ಗುರು ವರ್ಗದವರೆ ಆಗಿರುತ್ತಾರೆ. ಅದೇ ರೀತಿ ಶ್ರಾವಣ ಮಾಸದ ಕೊನೆಯ ಸೋಮವಾರದಂದು ಊರಲ್ಲಿಯ ರೇವಣಸಿದ್ಧೇಶ್ವರ ಜಾತ್ರೆಯನ್ನು ಮತ್ತು 'ಹಿರೇಗುಡ್ಡ'

ದಲ್ಲಿ ಹೇಳಿಕೆಗಳನ್ನು ಹೇಳುತ್ತಾರೆ. ಹೀಗೆ ಕುರುಬರ ಗುರು ಪರಂಪರೆಯ ಮೂಲ ಪೀಠವಾದ ಸರೂರಿನಲ್ಲಿ ಶ್ರೀ ರೇವಣಸಿದ್ಧೇಶ್ವರ ಜಾತ್ರೆಯು ವರ್ಷಕ್ಕೆ ಎರಡು ಬಾರಿ ಜರುಗುತ್ತಿರುವುದು ವಿಶೇಷ. ಈ ಜಾತ್ರೆಗೆ ನಾಡಿನ ನಾನಾ ಮೂಲೆಯಿಂದ ಕುರುಬ ಜನಾಂಗದ ಭಕ್ತರು ಬರುತ್ತಾರೆ. ಹಾಗೆ ಬಂದಿರುವ ಭಕ್ತವರ್ಗ ದವರನ್ನು ಇಲ್ಲಿಯ ಗುರುವರ್ಗದವರು ಪ್ರೀತಿ ವಾತ್ಸಲ್ಯದಿಂದ ಕಂಡು ಆಶೀರ್ವದಿಸಿ ಕಳಿಸುತ್ತಾರೆ. ಒಡೆಯರುಗಳು ಬರುತ್ತಾರೆ. ಹಿಂದೆ ಎಲ್ಲಾ ರೇವಣಸಿದ್ಧ ಮಠಗಳ ಒಡೆಯರು ಇಲ್ಲಿಗೆ ಬರುತ್ತಿದ್ದರು. ಈಗ ಈ ವಿಧಾನ ಕಡಿಮೆ ಆಗಿದೆ. ಹತ್ತಿರವಿರುವ ಮತ್ತು ನಮ್ಮ ಜೊತೆ ಸಂಪರ್ಕದಲ್ಲಿರುವ ಒಡೆಯರು ಬರುತ್ತಾರೆ ಎಂದು ಸರೂರಿನ ಮಲ್ಲಿಕಾರ್ಜುನ ಒಡೆಯರವರು ಹೇಳುತ್ತಾರೆ. ಹೀಗೆ ಸರೂರು ಗ್ರಾಮ ಒಡೆಯರ ಮೂಲ ಸ್ಥಳ ಎನ್ನುವ ಅನನ್ಯತೆಗೆ ಪ್ರಸಿದ್ಧವಾಗಿದೆ.

**೨.೭.೨. ಬಸವ ಕಲ್ಯಾಣ**

ಶಾಂತಮುತ್ತಯ್ಯನವರ ಜೀವನ ಚರಿತ್ರೆಯಾಗಿರುವ 'ತಗರ ಪವಾಡ' ಕೃತಿಯು ಶಾಂತಮುತ್ತಯ್ಯ ನವರು ಕಲ್ಯಾಣದಲ್ಲಿ ಬಸವಾದಿ ಶರಣರ ಸಮ್ಮುಖದಲ್ಲಿ ಸತ್ತಿರುವ ತಗರವನ್ನು ಬದುಕಿಸಿ ಪವಾಡವನ್ನು ಮೆರೆದ ಬಸವಣ್ಣ ಬಿಜ್ಜಳರಿಂದ ಗೌರವನ್ನು ಸ್ವೀಕರಿಸಿದ ಸಂಗತಿಯನ್ನು ಹೇಳುತ್ತದೆ. ಹೀಗಾಗಿ ಶಾಂತ ಮುತ್ತಯ್ಯನವರು ಜೀವಿಸಿದ ಕಾಲವು ಬಸವಾದಿ ಪ್ರಥಮರು ಜೀವಿಸಿರುವ ಕಾಲವೇ ಆಗಿದೆ ಎಂದು ಹೇಳಬಹುದು.

ಕಲ್ಯಾಣ ಪಟ್ಟಣದಲ್ಲಿ ವಾಸವಾಗಿದ್ದ ಶರಣ ಸಂಪ್ರದಾಯದ ಕುರುಬರು ಶರಣರಿಗೆ ಹಾಲು ಮೊಸರು ಮಾರುವ ವೃತ್ತಿಯನ್ನು ಕೈಗೊಂಡಿದ್ದರು. ಶಿವನು ಸಿದ್ಧಶೆಟ್ಟಿ, ಮಲ್ಲಿಶೆಟ್ಟಿ ರೂಪಧರಿಸಿ ಸಮೀಪದ ಕಟವಾಡಿ ಗ್ರಾಮದವರೆಂದು ಹೇಳಿಕೊಳ್ಳುತ್ತ ಅದೇ ಪೇಟೆಯಲ್ಲಿ ಹಾಲು ಮೊಸರು ಮಾರಾಟದಲ್ಲಿ ನಿರತರಾಗಿದ್ದರು. ಒಮ್ಮೆ ಕುರುಬರು ಸತ್ತ ಕುರಿಯನ್ನು, ಹಾಲಿನ ಹರವಿಯ ಮೇಲೆ ಹೊತ್ತು ತರಲು ಶರಣರ ಪೇಟೆ ಅಪವಿತ್ರವಾಯಿತೆಂದು ಇವರು ಪ್ರತಿಭಟಿಸುತ್ತಾರೆ. ಈ ಕಾರಣಕ್ಕಾಗಿ ಕುರುಬರನ್ನು 'ರಟ್ಟಮತ'ದವರೆಂದು ಕಲ್ಯಾಣ ಪಟ್ಟಣದಿಂದ ಹೊರ ಹಾಕಲಾಯಿತು. ಇದರಿಂದ ಕುರುಬರು ಅಸ್ಪೃಶ್ಯರಂತೆ ಅಡವಿಯಲ್ಲಿ ಬಾಳ ತೊಡಗಿದರು. ಬಹಿಷ್ಕೃತ ಜೀವನ ಕಷ್ಟವಾಗಿತ್ತು. ವ್ಯಾಪಾರ ವಹಿವಾಟುಗಳು ನಿಂತು ಹೋಗಿದ್ದವು. ಆಹಾರ ಸಂಸ್ಕೃತಿಗೆ ದಕ್ಕೆ ಬಂದಿತ್ತು. ಈ ಅಪವಾದವು ಇವರನ್ನು ಘಾಸಿಗೊಳಿಸುತ್ತಿತ್ತು. ಆಗ ತಮ್ಮ ಆರಾಧ್ಯದೈವ ಶಿವನಲ್ಲಿ ಮೊರೆ ಇಟ್ಟರು. ಇದನ್ನು ಅರಿತ ಶಿವನು ಕುರುಬರನ್ನು ಕುಲವಂತ ರನ್ನಾಗಿ ಮಾಡಲು ಬಯಸಿ, ಸಿದ್ಧಶೆಟ್ಟಿಯ ರೂಪದಲ್ಲಿ ಅಡವಿಗೆ ಬಂದನು. ತಮ್ಮನ್ನು ಕುಲೀನರನ್ನಾಗಿ ಮಾಡಲು ಅಲ್ಲಿಯ ಕುರುಬರು ಭಿನ್ನವಿಸಿದರು. ಆಗ ಶಿವ ಸರೂರು ಗ್ರಾಮದ ಶರಣ ಶಾಂತಯ್ಯನ ಮೊರೆಹೊಕ್ಕು ಕುಲೀನರಾಗಲು ಸಿದ್ಧಶೆಟ್ಟಿ ಅವರಿಗೆ ಸೂಚಿಸುತ್ತಾನೆ. ಅವನ ಸೂಚನೆಯಂತೆ ಕುರುಬರು ಸರೂರಿಗೆ ಬಂದು ಶಾಂತಯ್ಯನಲ್ಲಿ ಮೊರೆಯಿಡುತ್ತಾರೆ. ತಗರದ ಶವದೊಂದಿಗೆ ಸಕಲ ಕುರುಬರನ್ನು ಕೂಡಿಕೊಂಡು ಶಾಂತಯ್ಯ ಕಲ್ಯಾಣ ಪಟ್ಟಣದೊಳಗೆ ಬರುತ್ತಾನೆ. ಕಲ್ಯಾಣ ಅಪವಿತ್ರವಾಯಿತೆಂದು ಬಗೆದು ಶರಣರು ಈ ತಗರವನ್ನು ಬದುಕಿಸಿದ್ದರೆ ಕಲ್ಯಾಣಕ್ಕೆ ಹಾನಿಯಂದು ಪ್ರತಿಭಟಿಸುತ್ತಾರೆ. ಆಗ ಶಾಂತಯ್ಯನು 'ಎನ್ನಯ್ಯ ಸಿದ್ಧರೇವಣನರಿಕೆಯ ಚೆನ್ನಮೇಷನ ಪವಾಡ ನಿರ್ಣಯಿಸದಿದ್ದರೆ, ನಿಮ್ಮ ಚರಣ ಸೇವಕನಲ್ಲ'

ಎಂದು ಸಾರಿ, ಸತ್ತ ತಗರವನ್ನು ತ್ರಿಪುರಾಂತಕ ದೇವಾಲಯಕ್ಕೆ ತರುತ್ತಾನೆ. ಈ ಪವಾಡ ನೋಡಲು ಬಿಜ್ಜಳನೊಂದಿಗೆ ಬಸವಣ್ಣ ಮೊದಲಾದ ಶರಣರು ಬರುತ್ತಾರೆ. ಶಾಂತಯ್ಯನು ತಗರಿಗೆ ಭಸಿತವನ್ನಿಟ್ಟು ಮೈದಡವಿ ತೀರ್ಥ ಪ್ರಸಾದವನ್ನು ತಳೆಯುತ್ತಾನೆ. ಕ್ಷಣಾರ್ಧದಲ್ಲಿಯೇ ಮಲಗಿದ್ದ ತಗರು ಘುಡುಘುಡಿಸುತ್ತ ಮೇಲೇಳುತ್ತದೆ. ಶಾಂತಯ್ಯನ ಈ ಪವಾಡವನ್ನು ನೋಡಿದ ಬಿಜ್ಜಳನಿಗೆ ಪರಮಾಶ್ಚರ್ಯವಾಗುತ್ತದೆ. ನೆರೆದಿದ್ದ ಶರಣರಾದಿಯಾಗಿ ಅಲ್ಲಿದ್ದ ಜನರೆಲ್ಲ ಶಾಂತಯ್ಯನ ಭಕ್ತಿ ವಿಶ್ವಾಸ ಮತ್ತು ದೃಢತೆಗೆ ತಲೆ ದೂಗುತ್ತವೆ.

ಬಸವಣ್ಣನು ಶಾಂತಯ್ಯನನ್ನು ಹತ್ತಿರ ಕರೆದು ಬೇಕಾದ ವರವನ್ನು ಬೇಡು ಎನ್ನುತ್ತಾನೆ. ಆಗ ಶಾಂತಯ್ಯನು 'ನಿಮ್ಮ ದಯದಿಂದ ನನಗೆ ಯಾವುದಕ್ಕೂ ಕೊರತೆಯಿಲ್ಲ. ರಟ್ಟಮತದವರೆಂದು ಕಲ್ಯಾಣ ಪಟ್ಟಣದಿಂದ ಹೊರಹಾಕಲ್ಪಟ್ಟ ಕುರುಬ ಕುಲವನ್ನು ಪುರಸ್ಕರಿಸಿ ಉದ್ಧರಿಸಬೇಕು. ಇದೇ ನನ್ನ ಬೇಡಿಕೆ' ಎನ್ನುತ್ತಾನೆ. ಶಾಂತಯ್ಯನ ಕೋರಿಕೆಯನ್ನು ಈಡೇರಿಸಿದ ಬಸವಣ್ಣ ಕೂಡಲೇ ಮಂಗಳ ವಸ್ತುಗಳನ್ನು ತರಸಿ, ನೆರದಿದ್ದ ಶರಣ ಸಮೂಹದಲ್ಲಿ ಶಾಂತಯ್ಯನನ್ನು ಕರಸಿ ಭಸಿತವನ್ನಿಟ್ಟು ಇಂದಿನಿಂದ ಕುರುಬ ಕುಲಕ್ಕೆ ಶಾಂತಯ್ಯನೇ ಗುರುವೆಂದು ಸಾರುತ್ತಾನೆ. ಆಗ ನೆರೆದ ಜನರು ಒಪ್ಪಿಕೊಳ್ಳುತ್ತಾರೆ. ತಮ್ಮ ಮೇಲೆ ಬಂದ ಅಪವಾದ ಬಯಲಾಯಿತೆಂದು ಖುಷಿ ಪಡುತ್ತಾರೆ.

ಈ ರೀತಿ ಕುರುಬರನ್ನು ಬಹಿಷ್ಕರಿಸಿದ ಮೇಲುವರ್ಗದವರ ಜೊತೆಗೆ ಪಂಥವನ್ನು ಗೆದ್ದ ಶಾಂತಯ್ಯ ಪಲ್ಲಕ್ಕಿಯನ್ನು ಏರಿ ಕಲ್ಯಾಣ ಪಟ್ಟಣದೊಳಗೆ ಕುರುಬರ ಗುರುತನ ಪಡೆಯುತ್ತಾನೆ. ಅವನಿಗೆ ಗುರುತನ ದೊರಕಿರುವ ಸಂಗತಿಯನ್ನು ಕಲ್ಯಾಣ ಪಟ್ಟಣದೊಳಗೆ ಶಾಸನವಾಗಿ ಕೆತ್ತಿಸಿದರಂತೆ. ಅದನ್ನು ಜನಪದರು ಅಭಿವ್ಯಕ್ತಗೊಳಿಸಿದ್ದು ಹೀಗೆ,

"ಕಲ್ಯಾಣ ಪಟ್ಟಣದೊಳಗೆ ಅಲ್ಲೇನು ಚೋಜಿಗ
ಅಲ್ಲಿ ನಮಗುರುವಿಗೆ ಗುರುತನ | ಆದಾವೆಂದು
ಕಲ್ಲಿಗೆ ಸಾಸಣವುಡುದಾವು |"

ಕುರುಬರ ಗುರುತನವನ್ನು ಪಡೆದ ಶಾಂತಯ್ಯ ಬಿಜ್ಜಳನ ಅರಮನೆಯಲ್ಲಿ ಒಪ್ಪಗೆ ಹಾಕಿದ ಮಣೆಯ ಮೇಲೆ ಕುಳಿತು ಪಟ್ಟದ ವೀಳ್ಯವನ್ನು ಸ್ವೀಕರಿಸುತ್ತಾನೆ. ಹೀಗೆ ಬಿಜ್ಜಳನಿಂದ ಪಟ್ಟದ ವೀಳ್ಯವನ್ನು ಸ್ವೀಕರಿಸಿದ ತಮ್ಮ ಗುರುವನ್ನು ನಾಡಿನ ಮೂಲೆ ಮೂಲೆಯಿಂದ ಕುರುಬರು ಪಲ್ಲಕ್ಕಿಯಲ್ಲಿ ತರಿಸಿ ಮರುಗಮಲ್ಲಿಗೆ, ರುದ್ರಾಕ್ಷಿ ಸರವನ್ನು ಧರಿಸಿ ಮೇಲೆ ಸತ್ತಿಗೆಯನ್ನು ಹಿಡಿದು ಕಲ್ಯಾಣದ ಬೀದಿ ಬೀದಿಯಲ್ಲಿ ಮೆರವಣಿಗೆ ಮಾಡುತ್ತಾರೆ. ಈ ಚಿತ್ರಣ ಕುರುಬರಿಗೆ ಆದ ಸಂತೋಷವನ್ನು ಮತ್ತು ಆ ಸಂದರ್ಭದಲ್ಲಿ ಉಂಟಾದ ಧಾರ್ಮಿಕ, ಸಾಮಾಜಿಕ, ಆರ್ಥಿಕ ಒತ್ತಡವನ್ನು ತಿಳಿಸುತ್ತದೆ. ಈ ಒತ್ತಡದಿಂದ ಮುಕ್ತಿ ಪಡೆದ ನೆನಪಾಗಿ ಒಡೆಯರ ಸಂಸ್ಕೃತಿ ನಮಗೆ ಕಾಣಿಸುತ್ತದೆ. ಆದರೆ ಇದರಿಂದ ಕುರುಬ ಸಂಸ್ಕೃತಿಯಲ್ಲಿ ಸಂಸ್ಕೃತೀಕರಣ ವಾಯಿತು. ಪಾರಂಪರಿಕ ನೆನಪುಗಳು ವಿಸ್ಮೃತಿ ಆದವು. ಈ ಸಂಸ್ಕೃತಿ ಮುಂಚೂಣಿಗೆ ಬಂದಿತು.

೨.೭.೩. ಶಿರವಾಳ

ಶಿರವಾಳ, ಕಲಬುರ್ಗಿ ಜಿಲ್ಲೆ ಶಹಪುರ ತಾಲೂಕಿನ ಒಂದು ಹಳ್ಳಿ. ಶಹಪುರದಿಂದ ಈಶಾನ್ಯಕ್ಕೆ ೧೫ ಕಿ.ಮೀ. ದೂರದಲ್ಲಿ ಭೀಮಾ ನದಿಯ ಬಲದಂಡೆಯ ಮೇಲೆ ಸುಮಾರು ಎರಡು ಕಿ.ಮೀ. ಅಂತರದಲ್ಲಿ ಇರುವ ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಪ್ರವಾಸಿಗರಿಗೆ ಬಂದು ಹೋಗಲು ಬಸ್ಸಿನ ವ್ಯವಸ್ಥೆಯು ಇದೆ. ಶೈವ ಪುರಾಣೋಕ್ತ ಸಿರಿಯಾಳ ಶೆಟ್ಟಿಯ ಹುಟ್ಟೂರು ಇದೆ ಎಂಬ ಐತಿಹ್ಯವು ಇಲ್ಲಿದೆ. ಪ್ರಾಚೀನ ಶಾಸನಗಳಲ್ಲಿ 'ಶ್ರೀವೊಳಲು', 'ಸಿರಿವೊಳಲ', 'ದಕ್ಷಿಣ ವಾರಣಾಸಿ, 'ಧರ್ಮದ ಮನೆ', 'ಆದಿಪಟ್ಟಣ ಎಂದೆಲ್ಲಾ ಹೊಗಳಿಸಿಕೊಂಡಿರುವ ಈ ಊರು ಹಿಂದೆ ಸಗರನಾಡಿಗೆ ಸೇರಿತ್ತು. ಈ ಊರು ಶಾತವಾಹನರಷ್ಟು ಪ್ರಾಚೀನವಾದ ನೆಲೆಯಾಗಿದ್ದು, ಇಲ್ಲಿಂದ ಈವರೆಗೆ ಐದು ಶಾಸನಗಳು ವರದಿಯಾಗಿವೆ. ಇವುಗಳಲ್ಲಿ ರಾಷ್ಟ್ರಕೂಟ ಚಕ್ರವರ್ತಿ ಅಕಾಲ ವರ್ಷನ ಕಾಲಕ್ಕೆ ಸೇರಿದ ಶಾಸನವು ಸಗರ ನಾಡ ಗಾವುಂಡ 'ಚಂದಯ್ಯ'ನಿಗೆ ಆ ಗ್ರಾಮದ ಜನ ಕೆಲವರು ೧೦೦ ಗದ್ಯಾಣಗಳನ್ನು ಕೊಟ್ಟು ೫೦ ಎಕರೆ ಭೂಮಿಯನ್ನು ಖರೀದಿಸಿ ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಸುಮಾರು ೧೦ನೇ ಶತಮಾನದ ಕಿರು ಶಾಸನವೊಂದು ಪಡೆಯಣ್ಣನ ಮಗ ಸಂಪಯ್ಯನ ಧರ್ಮವನ್ನು ದಾಖಲಿಸಿದೆ. ಸಿದ್ಧಲಿಂಗೇಶ್ವರ ದೇವಾಲಯದ ಕಂಬದ ಮೇಲಿರುವ ಶಾಸನವು ಮುಮ್ಮಡಿ ಸೋಮೇಶ್ವರನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರ ಸೋವಿದೇವರಸನ ಹಾಗೂ ಸಿರಿವೊಳಲ ಪ್ರಭುಗಳು, ವ್ಯಾಪಾರಿಗಳು ಹಾಗೂ ತಂಬುಲಿಗ ಸಾಸಿರ್ವರು ಒಂದಾಗಿ ಕದಂಬೇಶ್ವರ ದೇವರ ಜೀರ್ಣೋದ್ಧಾರ ಪೂಜಾ ವಿಧಿಗಳಿಗೆಂದು ೩೨ ಗೇಣ ಕೋಲಲ್ಲಿ ಆರು ಮತ್ತರು ಭೂಮಿ ಒಂದು ಮತ್ತರು ತೋಟ ಹಾಗೂ ವಿವಿಧ ಸುಂಕಗಳನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತಾ, ಸಾಂದರ್ಭಿಕವಾಗಿ ಎರಡೇಶ್ವರ ಹಾಗೂ ಚಟ್ಟೇಶ್ವರ ದೇವರುಗಳ ಬಗ್ಗೆ ಹೇಳುತ್ತದೆ. ಅದೇ ಗುಡಿಯ ದಕ್ಷಿಣ ರಂಗಮಂಟಪದ ಕಂಬದ ಮೇಲಿರುವ ೧೧೭೮ರ ಶಾಸನವು ಮಹಾಮಂಡಳೇಶ್ವರ ಎಳಮೇಲ ಸಿಂಗಿದೇವರಸನ ತಾಯಿ ನಾಗಲದೇವಿ, ಮಹಾಪ್ರಧಾನ ಕೇತಯ ನಾಯಕರು ಹಾಗೂ ಯಾದವ ಭಿಲ್ಲಮದೇವನ ಅಧಿಕಾರಿ ಅಪ್ಪಯ್ಯ ನಾಯಕನು ಎಳೆಮಲ ೫೦ರಲ್ಲಿದ್ದ ಮರವಡಿ ಗ್ರಾಮವನ್ನು ಸಿರಿವೊಳಲ ಸಿದ್ಧಶಾಂತೇಶ್ವರ ದೇವರ ಪೂಜಾ ವಿಧಿಗೆಂದು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೇ ಶಿವಯೋಗಿ ಶಾಂತಿಮಯ್ಯ ಹಾಗೂ ಅವನ ಮಗ ರೇವಣದೇವಯ್ಯಗಳ ಪವಾಡಗಳನ್ನೂ ಹೇಳುತ್ತದೆ. ಹೋತಗಲ್‌ನ ೧೧೮೫ರ ಶಾಸನ ಕಲ್ಯಾಣದ ಚಾಳುಕ್ಯ ಅರಸ ನಾಲ್ಕನೆಯ ಸೋಮೇಶ್ವರನ ಕಾಲದ್ದಾಗಿದ್ದು, ಸೌದೊರೆ ಬಮ್ಮಯ್ಯ ಹಾಗೂ ಇತರರು ಹೋತಗಲ್ಲನ್ನು ಸಿದ್ಧಶಾನ್ತೀಶ್ವರ ದೇವರಿಗೆ ದಾನ ಕೊಟ್ಟ ವಿಷಯ ತಿಳಿಸುತ್ತದೆ. ಹನುಮಂತನ ಗುಡಿ ಬಳಿಯಿರುವ ೧೫೩೭ರ ಶಾಸನವು ಕಲಬುರ್ಗಿ ನಾಡಿನ ಮಾಗಡಿಯ ಮಲ್ಲೋಜನ ಮಗ ದೇವರಸನು ಸಿರವೊಳಲ ಗ್ರಾಮದ ಹನುಮಂತನ ಗುಡಿ ನಿರ್ಮಾಣ ಕಾರ್ಯವನ್ನು ಗ್ರಾಮದ ಸೇನಭೋಗ ನಾಗಿಯರ ಆಶ್ರಯದಲ್ಲಿ ಪೂರ್ಣಗೊಳಿಸಿದ ಅಂಶವನ್ನು ದಾಖಲಿಸಿದೆ. ಒಟ್ಟಾರೆ ಶಿರವಾಳ ಹಾಗೂ ನೆರೆಹೊರೆ ಗ್ರಾಮದಲ್ಲಿರುವ ಶಾಸನಗಳಿಂದ ಹಿಂದೆ ಶಿರವಾಳದಲ್ಲಿ ಕಂದಬೇಶ್ವರ, ಸುಜ್ಞಾನೇಶ್ವರ, ಚಟೇಶ್ವರ, ಸಿದ್ಧಶಾಂತೇಶ್ವರ, ಅಲ್ಮೇಶ್ವರ, ಮಹಾದೇವ, ಸೋಮೇಶ್ವರ, ಶಾಂತೀಶ್ವರ, (ಸಿದ್ಧನಾತೇಶ್ವರ) ಮುಂತಾದ ದೇವಾಲಯಗಳಿದ್ದ ಅಂಶ ಗೊತ್ತಾಗುತ್ತದೆಯಾದರೂ ಅವುಗಳಿಂದ ಖಚಿತವಾಗಿ ಗುರುತಿಸಲಾಗಿಲ್ಲ. ಊರಿನಲ್ಲಿ ಸುಮಾರು ೨೦ ಪ್ರಾಚೀನ ದೇಗುಲಗಳಿವೆ. ಇವುಗಳಲ್ಲಿ ಅಣಬಿ ಗ್ರಾಮಕ್ಕೆ ಹೋಗುವ

ರಸ್ತೆಯ ಇಕ್ಕೆಲದಲ್ಲಿ ಏಳು, ಹಳ್ಳದಾಚೆಗೆ ಮೂರು ಹಾಗೂ ಊರಲ್ಲಿ ಹತ್ತು ದೇವಾಲಯಗಳಿವೆ. ಈ ದೇವಾಲಯಗಳು ರಾಷ್ಟ್ರಕೂಟ-ಕಲ್ಯಾಣದ ಚಾಳುಕ್ಯ ಸಂಕ್ರಮಣ ಕಾಲಾವಧಿ ಹಾಗೂ ಕಳಚೂರಿಗಳ ಕಾಲದ ರಚನೆಗಳಾಗಿದ್ದು, ಇವುಗಳಲ್ಲಿ ಕೆಲವು ಉತ್ಕೃಷ್ಟ ಕಲಾಕೃತಿಗಳಾಗಿವೆ. ಇಲ್ಲಿಯ ಗುಡಿಗಳಲ್ಲಿ ಊರ ಹಳ್ಳದಿಂದಾಚೆಗೆ ಇರುವ ಸುಜ್ಞಾನೇಶ್ವರ, ನಾಗಯ್ಯ ಮತ್ತು ನನ್ನಯ್ಯನ ಗುಡಿ ಸಂಕೀರ್ಣವು, ಪ್ರಾಚೀನದ್ದಾಗಿದ್ದು ಅದರಲ್ಲೂ ನನ್ನಯ್ಯ ಹಾಗೂ ನಾಗಯ್ಯನ ಗುಡಿಗಳು ರಾಷ್ಟ್ರಕೂಟರ ಕಾಲದ ರಚನೆಗಳೆಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ. ಈ ಎರಡು ಗುಡಿಗಳು ಗರ್ಭಗೃಹ, ಸುಕನಾಸಿ, ಅರ್ಧಮಂಟಪ, ಕಿರುಸಭಾಮಂಟಪ, ನವರಂಗ ಹಾಗೂ ಪ್ರವೇಶದ್ವಾರ ಮಂಟಪಗಳನ್ನು ಹೊಂದಿದ್ದು ಬೃಹತ್ತಾಗಿವೆ. ಗರ್ಭಗೃಹಗಳಲ್ಲಿ ಶಿವಲಿಂಗಗಳಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯನ್ನುಳ್ಳ ತ್ರಿಶಾಖಾಲಂಕೃತ ದ್ವಾರಬಂಧಗಳಿವೆ. ಬೃಹತ್ತಾದ ನವರಂಗದ ಕಂಬಗಳು ಆಕರ್ಷಕವಾಗಿದ್ದು ನಡುವಣ ನವರಂಗಗಳ ನಡುವೆ ಇರುವ ಕಿರುಸಭಾಮಂಟಪದ ಭಿತ್ತಿಯಲ್ಲಿ ಸುಂದರವಾದ ಶಿವ ತಾಂಡವ ನೃತ್ಯ ಶಿಲ್ಪ ಕೆತ್ತನೆಯಿರುವ ಜಾಲಂದ್ರವನ್ನು ಒದಗಿಸುವ ಮೂಲಕ ಬೆಳಕಿನ ವ್ಯವಸ್ಥೆ ಮಾಡಿರುವುದು ಗಮನಾರ್ಹವಾಗಿದೆ. ಆಕರ್ಷಕವಾದ ಕೆತ್ತನೆಗಳಿಂದ ಅಲಂಕೃತವಾದ ಅಧಿಷ್ಠಾನ ಮೇಲೆ ನಿಂತಿರುವ ಈ ಗುಡಿಗಳ ಭಿತ್ತಿಗಳ ಕಿರುಸ್ತಂಭ ಹಾಗೂ ಕಿರು ಶಿಖರಗಳನ್ನು ಹೊಂದಿದ್ದು ಮಿಥುನ ಶಿಲ್ಪಗಳೂ ಇವೆ. ಇಲ್ಲಿಯ ಸುಜ್ಞಾನೇಶ್ವರ ಗುಡಿಯು ಜೀರ್ಣೋದ್ಧಾರಗೊಂಡಿದ್ದು, ಅದರ ಬಾಗಿಲವಾಡವು ಸುಮಾರು ೧೦ನೇ ಶತಮಾನದ ಲಕ್ಷಣಗಳನ್ನು ಹೊಂದಿದ್ದರೂ, ಈ ಪರಿಸರದಲ್ಲಿ ಸುಮಾರು ೧೦-೧೧ನೇ ಶತಮಾನಕ್ಕೆ ಸೇರಿದ ಸ್ತಂಭಗಳನ್ನು ನೋಡಬಹುದಾಗಿದೆ. ಈ ದೇವಾಲಯದ ಹಿಂಬದಿಯಲ್ಲಿ ಆಕರ್ಷಕವಾದ ಪುಷ್ಕರಣಿ ಇದ್ದು ಅದರ ಭಿತ್ತಿಯಲ್ಲಿ ರಾಮಾಯಣದ ಕಥನಾವಳಿಯ ಸುಂದರವಾದ ಉಬ್ಬು ಕೆತ್ತನೆಗಳಿವೆ. ಒಟ್ಟಾರೆ ಈ ದೇಗುಲ ಸಮುಚ್ಚಯವು ರಾಷ್ಟ್ರಕೂಟ - ಕಲ್ಯಾಣದ ಚಾಳುಕ್ಯ ಪರಿವರ್ತನಾ (೧೦ನೇ ಶತಮಾನದ) ಹಂತದ್ದೆಂದುಹೇಳಿದರೆ ತಪ್ಪಾಗಲಾರದು. ಅದರಿಂದ ಇವು ಶಿಥಿಲಾವಸ್ಥೆಯಲ್ಲಿವೆ.

ಅಣವಿ ರಸ್ತೆಯಲ್ಲಿರುವ ಏಳು ಪ್ರಾಚೀನ ದೇವಾಲಯಗಳಲ್ಲಿ ೫ ಏಕಕೂಟಗಳಾದರೆ, ಉಳಿದೆರಡು ದ್ವಿಕೂಟಗಳಾಗಿವೆ. ಸುಮಾರು ೧೧-೧೨ನೇ ಶತಮಾನಕ್ಕೆ ಸೇರಿದ ಈ ದೇವಾಲಯಗಳಲ್ಲಿ ಏಕಕೂಟ ಗುಡಿಗಳು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ಪಾರ್ಶ್ವದ್ವಾರದ ದ್ವಿಕೂಟ ಗುಡಿಗಳು ತೆರೆದ ನವರಂಗಗಳನ್ನು ಹೊಂದಿದ್ದು, ಜೀರ್ಣಾವ್ಯವಸ್ಥೆಯಲ್ಲಿವೆ. ಇವೆಲ್ಲವೂ ಶೈವ ದೇವಾಲಯಗಳಾಗಿದ್ದು, ಇವುಗಳ ಭಿತ್ತಿಯು ನಿರಾಡಂಬರವಾಗಿವೆ. ಅಣವಿ ರಸ್ತೆಯ ಬಲಭಾಗಕ್ಕಿರುವಂತೆ ಇರುವ ಪುಷ್ಕರಣಿಯು ಬಹಳ ಕಲಾತ್ಮಕವಾಗಿದ್ದು. ಇದರ ಭಿತ್ತಿಯ ಮೇಲಿರುವ ಗಜಲಕ್ಷ್ಮಿ, ರಾಮ, ಉಗ್ರನರಸಿಂಹ, ಕಿರಾತಾರ್ಜುನ ಮುಂತಾದ ಸುಂದರವಾದ ಉಬ್ಬು ಕೆತ್ತನೆಗಳು ಗಮನಾರ್ಹವಾಗಿವೆ. ಈ ಪುಷ್ಕರಣಿಯ ಎರಡು ದಿಕ್ಕಿನಲ್ಲಿ ಮೇಲೆ ಗರ್ಭಗೃಹವಿದ್ದು ಇಂದು ಶಿಥಿಲವಾಗಿವೆ. ಇದು ಶೈವಸಂಸ್ಕೃತಿಯ ವಾತಾವರಣವನ್ನು ತಿಳಿಸುತ್ತದೆ.

ಊರಲ್ಲಿರುವ ಹತ್ತು ಪ್ರಾಚೀನ ದೇವಾಲಯಗಳಲ್ಲಿ ಸಿದ್ಧಲಿಂಗೇಶ್ವರ ಗುಡಿಯೇ ಮಹತ್ವದ್ದಾಗಿದೆ. ಈ ದೇವಾಲಯಕ್ಕೆ ಪಂಚಕೂಟವಾಗಿದ್ದು, ನಾಲ್ಕು ದಿಕ್ಕಿನಲ್ಲೂ ಪ್ರತ್ಯೇಕ ಗರ್ಭಗೃಹ, ಅಂತರಾಳ ಹಾಗೂ

ನವರಂಗಗಳಿವೆ. ಇವುಗಳನ್ನು ಒಗ್ಗೂಡಿಸುವ ನಡುವಣ ಸ್ಥಳದಲ್ಲಿರುವ ಗರ್ಭಗೃಹಕ್ಕೆ ನಾಲ್ಕು ದಿಕ್ಕಿನಿಂದಲೂ ಪ್ರವೇಶದ್ವಾರವಿದೆ. ಪೂರ್ವ-ಪಶ್ಚಿಮದ ದೇಗುಲಗಳ ನವರಂಗಗಳಿಗೆ ದ್ವಾರಮಂಟಪಗಳಿದ್ದರೆ, ಉತ್ತರ - ದಕ್ಷಿಣದ ದೇಗುಲಗಳು ನವರಂಗಗಳನ್ನಷ್ಟೇ ಹೊಂದಿದ್ದು ರಕ್ಷಾಸನಗಳಿವೆ. ಈ ಪಂಚದೇಗುಲದ ಎಲ್ಲಾ ಗರ್ಭಗೃಹಗಳಲ್ಲಿ ಶಿವಲಿಂಗಗಳಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯನ್ನುಳ್ಳ ತ್ರಿಶಾಖಾಲಂಕೃತ ಬಾಗಿಲವಾಡಗಳನ್ನು ಹೊಂದಿದ್ದರೆ, ನವರಂಗದ ಪ್ರಧಾನ ದ್ವಾರಗಳು ಸುಂದರವಾದ ಪಂಚಶಾಖಾಲಂಕೃತ ಬಾಗಿಲವಾಡಗಳನ್ನು ಹೊಂದಿವೆ. ಈ ದೇವಾಲಯದ ನವರಂಗಗಳ ಛತ್ತು ಚಿತ್ತಾಕರ್ಷಕವಾಗಿದ್ದು, ಕಂಬಗಳು ಸುಂದರವಾದ ಉಬ್ಬು ಕೆತ್ತನೆಗಳನ್ನು ಹೊಂದಿವೆ. ಈ ದೇವಾಲಯದ ಉತ್ತರ ಭಾಗದ ನವರಂಗದಲ್ಲಿ ಕಂಬಗಳ ಮೇಲೆ ಭೈರವ, ಯೋಗ ನರಸಿಂಹ, ಸೂರ್ಯ, ಕೃಷ್ಣ, ವಿಷ್ಣು, ಶಿವ ಹಾಗೂ ಗಣಪತಿಯ ಉಬ್ಬು ಕೆತ್ತನೆಗಳಿದ್ದು ಕಂಬವೊಂದರ ಮೇಲೆ ಸಿಂಹ ದೇಹಮಾನವ ಶಿರದ ವ್ಯಕ್ತಿಯೊಬ್ಬ ಕಮಂಡಲಧಾರಿ ಯೋರ್ವನನ್ನು ಅಟ್ಟಿಸಿಕೊಂಡು ಹೋಗುತ್ತಿರುವಂತೆ ಕೆತ್ತಲಾಗಿದ್ದು, ಬದಿಯಲ್ಲಿ ಅಧಿಕ (+) ಚಿಹ್ನೆ ಇದೆ. ಇದು ಈ ದೇವಾಲಯದ ತಳವಿನ್ಯಾಸವನ್ನು ಸೂಚಿಸುವಂತಿದೆ. ಈ ದೇವಾಲಯದ ಆವರಣದಲ್ಲಿ ಪಶ್ಚಿಮಕ್ಕೆ ಇರುವ ಎರಡು ಕಿರು ಗುಡಿಗಳಲ್ಲಿ ಪದ್ಮಸೇನ ತೀರ್ಥಂಕರ ಹಾಗೂ ದೇವಿಯರ ಶಿಲ್ಪಗಳಿವೆ. ವಿಶಿಷ್ಟವಾದ ತಳವಿನ್ಯಾಸವನ್ನುಳ್ಳ ಈ ಪಂಚಲಿಂಗ ದೇವಾಲಯದ ಭಿತ್ತಿಯು ನಿರಾಡಂಬರವಾಗಿದೆ. ಈ ಗುಡಿಯ ಬಳಿಯಲ್ಲೇ ಭೈರವ, ದ್ವಿಬಾಹು ಗಣಪತಿ ಮುಂತಾದ ಶಿಲ್ಪಗಳಿವೆ. ಇದು ಶೈವ ಆರಾಧಕರ ಪ್ರಾಚೀನ ಸ್ಥಳವೆಂದು ಮತ್ತು ಪಶುಪಾಲಕರ ಆರಾಧ್ಯ ದೈವಗಳ ನೆಲೆ ಆಗಿರುವ ಮುಖ್ಯ ಲಕ್ಷಣಗಳು ಇಲ್ಲಿ ಕಾಣಸುತ್ತವೆ. ಅಲ್ಲದೇ ಶಿರವಾಳ ಶಾಸನದಲ್ಲಿ ಬರುವ ಶಿವಯೋಗಿ ಶಾಂತಿಮಯ್ಯ ಹಾಗೂ ಅವನ ಮಗ ರೇವಣದೇವಯ್ಯರಗಳು ಹಾಗೂ ಅವರ ಪವಾಡಗಳು ಗಮನಾರ್ಹವಾಗಿದ್ದು, ಅವರಿಗೂ ಈ ಗುಡಿಗೂ ಇದ್ದ ಸಂಬಂಧ ಮಹತ್ವದಾಗಿದೆ. ಇತ್ತೀಚೆಗೆ ಈ ದೇವಾಲಯದ ಶಿಖರವೂ ಜೀರ್ಣೋದ್ಧಾರ ಗೊಂಡಿದ್ದು, ಪುರಾತನದ ಗಾರೆ ನಿರ್ಮಿತ ಮೂರ್ತಿಗಳಿಂದ ಅದನ್ನು ಅಲಂಕರಿಸಲಾಗಿದೆ.

ಊರ ನಡುವೆ ಇರುವ ಬಲಭೀಮೇಶ್ವರ ಗುಡಿಯು ಕಲ್ಯಾಣದ ಚಾಳುಕ್ಯರ ಕಾಲದ ಗುಡಿಯ ಅವಶೇಷಗಳನ್ನು ಬಳಿಸಿ ಸುಮಾರು ೧೫೩೦ರಲ್ಲಿ ನಿರ್ಮಿಸಿರುವ ದೇವಾಲಯವಾಗಿದೆ. ಈ ಗುಡಿಯ ಬಳಿಯಲ್ಲೇ ಶಿಥಿಲಾವಸ್ಥೆಯಲ್ಲಿರುವ ಎರಡು ಪ್ರಾಚೀನ ದೇವಾಲಯಗಳಿವೆ. ಇವು ಮನೆಗಳಾಗಿವೆ. ಇಲ್ಲಿಯ ಮಲ್ಲಿಕಾರ್ಜುನ ಗುಡಿಯು ಗರ್ಭಗೃಹ, ತೆರೆದ ಅಂತರಾಳ ಹಾಗೂ ನಕ್ಷತ್ರಾಕಾರ (ಹೊರ ವಿನ್ಯಾಸ)ದ ನವರಂಗಗಳನ್ನು ಹೊಂದಿರುವ ಸರಳ, ಸುಂದರ ರಚನೆಯಾಗಿರುವ ದೇವಾಲಯ ಇದೆ. ಪ್ರಾಚೀನ ಆರಾಧ್ಯ ದೈವ, ಮೈಲಾರನೇ ಮಲ್ಲಯ್ಯ-ಮಲ್ಲಿಕಾರ್ಜುನಾಗಿ ರೂಪಾಂತರ ಆಗಿದ್ದಾನೆ ಎನ್ನುವ ವಾದಗಳು ಇವೆ. ಕುರುಬರು ಮಲ್ಲಿಕಾರ್ಜುನನ್ನು ಕುಲದೈವವನ್ನಾಗಿ ಮಾಡಿಕೊಂಡಿರುವ ಮನೆತನಗಳು ಕರ್ನಾಟಕದಲ್ಲಿ ಸಿಗುತ್ತವೆ. ಈ ಗ್ರಾಮದಲ್ಲಿ ಕೆಲವು ಕುರುಬ ಮನೆತನಗಳ ಮನೆದೇವರನ್ನಾಗಿ ಮಾಡಿಕೊಂಡು ಆರಾಧಿಸು ತ್ತಿವೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಇದರ ಬಾಗಿಲವಾಡವು ಚತುರ ಶಾಖಾಲಂಕೃತವಾಗಿದ್ದು, ಲಲಾಟ ದಲ್ಲಿ ಗಜಲಕ್ಷ್ಮಿಯಿದೆ. ಇದರ ಶಿರೋ ಭಾಗದಲ್ಲಿ ಹಂಸಾವಳಿಯ ಅಡ್ಡಪಟ್ಟಿಕೆ ಇದೆ. ನವರಂಗದ ನಡುವಣ ಛತ್ತು ಆಕರ್ಷಕವಾಗಿದ್ದು ಅಷ್ಟದಿಕ್ಪಾಲಕರಿಂದ ಆವೃತ್ತವಾದ ನಟರಾಜನ ಶಿಲ್ಪವುಳ್ಳ ಫಲಕದಿಂದ ಅಲಂಕೃತವಾಗಿದೆ. ನವರಂಗದ ಭಿತ್ತಿಯು ನಿರಾಡಂಬರವಾಗಿದ್ದು ನಡುವೆ ಸುಂದರವಾದ ಜಾಲಂದ್ರ

ಕಿಟಕಿಗಳಿವೆ. ಈ ದೇವಾಲಯವು ಸುಮಾರು ೧೦-೧೧ನೇ ಶತಮಾನಕ್ಕೆ ಸೇರಿದ್ದೆಂದು ವಾಸ್ತು ರಚನಾ ಹಿನ್ನೆಲೆಯಲ್ಲಿ ಅಭಿಪ್ರಾಯಪಡಬಹುದಾಗಿದೆ. ಇದರಿಂದ ಈ ಸ್ಥಳ ಹನ್ನೊಂದನೆ ಶತಮಾನದಲ್ಲಿ ಕುರುಬರ ಮುಖ್ಯ ಆರಾಧನ ಕೇಂದ್ರವಾಗಿತ್ತು ಎಂದು ಇದರಿಂದ ತಿಳಿದು ಬರುತ್ತದೆ. ಜೊತೆಗೆ ಸಿದ್ಧಲಿಂಗೇಶ್ವರ ಗುಡಿಗೆ ಹೋಗುವ ಹಾದಿಯಲ್ಲಿ ಬಲಕ್ಕೆ ಮೂರು ಪ್ರಾಚೀನ ದೇಗುಲಗಳಿವೆ. ಇವೆಲ್ಲವೂ ಗರ್ಭಗೃಹ ತೆರೆದ ಅಂತರಾಳ ಹಾಗೂ ನವರಂಗಗಳನ್ನು ಹೊಂದಿದ್ದು, ಇವುಗಳಲ್ಲೊಂದಕ್ಕೆ ಪಾರ್ಶ್ವ ದ್ವಾರವಿದೆ. ಈ ದೇವಾಲಯಗಳು ಸುಮಾರು ೧೧-೧೨ನೇ ಶತಮಾನಕ್ಕೆ ಸೇರಿದ ರಚನೆಗಳಾಗಿದ್ದು, ಉಳಿದೊಂದು ಸೂರ್ಯ ದೇವರಾಗಿದ್ದು ಅಂತರ್ಗತವಾಗಿರುವ ಆ ಗುಡಿಯಲ್ಲಿ ಸೂರ್ಯನ ಸುಂದರವಾದ ಶಿಲ್ಪವಿದೆ. ಶಿರವಾಳದಿಂದ ಈವರೆಗೆ ಪಂಚತಂತ್ರದ ನಾಲ್ಕು ಕಥಾಫಲಕಗಳು ವರದಿಯಾಗಿದ್ದು ಗಮನಾರ್ಹವಾಗಿವೆ.

ಹರಿಜನರ ಓಣಿಗೆ ಹೋಗುವ ಹಾದಿಯಲ್ಲಿ ಸುಮಾರು ೧೨ನೇ ಶತಮಾನದ ಮೂರು ಪ್ರಾಚೀನ ದೇವಾಲಯಗಳಿವೆ. ಇವೆಲ್ಲವೂ ಈಗ ಜೀರ್ಣಾವಸ್ಥೆಯಲ್ಲಿವೆ. ಉಳಿದಂತೆ ಊರಲ್ಲಿ ಪಾರ್ವತಿ - ಪರಮೇಶ್ವರ, ಉಮಾಮಹೇಶ್ವರ, ವೀರಭದ್ರ, ದುರಗಮ್ಮ ಮುಂತಾದ ನವೀನ ಗುಡಿಗಳಿದ್ದು ದರ್ಗ ಹಾಗೂ ಮಸೀದಿ ಕೂಡ ಇವೆ. ಶಾಬಾದಿ ಕಲ್ಲಿಗೆ ಹೆಸರಾಗಿರುವ ಈ ಪ್ರದೇಶದಲ್ಲಿ ಕಲ್ಗಣಿ ಪ್ರಮುಖ ಉದ್ಯಮವಾಗಿದ್ದು, ಶಿರವಾಳದ ಸುತ್ತಮುತ್ತ ಅಧಿಕ ಸಂಖ್ಯೆಯಲ್ಲಿ ಕಲ್ಗಣಿಗಳಿರುವುದನ್ನು ನೋಡಬಹುದಾಗಿದೆ. ಇದು ಕುರುಬ ಅಥವಾ ಶೈವಸಂಸ್ಕೃತಿಯ ಮೇಲೆ 'ಮುಸ್ಲಿಂ ಸಂಸ್ಕೃತಿ'ಯ ಪ್ರಭಾವ ಆಗಿರುವುದನ್ನು ಕಾಣಬಹುದು. ಇದೇ ತರದ ಚಿತ್ರಣ ಚಿತ್ರದುರ್ಗ ಜಿಲ್ಲೆಯ ದೊಡ್ಡೇರಿ ಗ್ರಾಮದಲ್ಲೂ ಸಿಗುತ್ತದೆ. ಈ ಪ್ರಭಾವದ ಚಿತ್ರಣವನ್ನು ಕುರಿತು ಪ್ರತ್ಯೇಕ ಅಧ್ಯಯನ ಮಾಡಬಹುದು.

**ಟಿಪ್ಪಣಿಗಳು**

೧. ಎಪಿಗ್ರಾಫಿಯಾ ಕರ್ನಾಟಕ ಚಿತ್ರದುರ್ಗ ಜಿಲ್ಲೆ, ಪು. ೩೫೯.
೨. ಡಾ. ಎಂ. ಚಿದಾನಂದಮೂರ್ತಿ, ಪಗರಣ ಮತ್ತು ಇತರ ಪ್ರಬಂಧಗಳು, ಪು. ೧೧೮.
೩. ಉಮೇಶ. ಹ ಹೊನ್ನೇರಿ, ಶಾಂತಮುತ್ತಯ್ಯ ಮತ್ತು ಸಿದ್ಧರ ಪವಾಡಗಳು, ಪು. ೬.
೪. ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), ತಗರ ಪವಾಡ, ಪ್ರಸ್ತಾವನೆ, ಪು. ೧೦೨-೧೦೪.
೫. ರಸ್ತಾಪುರ ಭೀಮಕವಿಯ ಹಾಲ್ಮತೋತ್ಪಜಕ ಪುರಾಣ (ಸಂ), ಬಾಗೂತನಯನವಿಲ್ಲ.
೬. ಡಾ. ಶಕುಂತಲಾ ಗೋಪಶೆಟ್ಟಿ ಅವರು ಕನ್ನಡ ಸಾಹಿತ್ಯದಲ್ಲಿ ರೇವಣಸಿದ್ಧರು ಒಂದು ಅಧ್ಯಯನ ಎಂಬ ವಿಷಯ ಕುರಿತು ಅಧ್ಯಯನ ಮಾಡಿರುವುದನ್ನು ಇಲ್ಲಿ ಗಮನಿಸಬಹುದು.
೭. ಡಾ. ಹನುಮಾಕ್ಷಿ ಗೋಗಿ, ಅನುಶಾಸನ, ಪು. ೧-೧೦.
೮. ಡಾ. ಹನುಮಾಕ್ಷಿ ಗೋಗಿ, ಅನುಶಾಸನ, ಪು. ೯.
೯. ಡಾ. ಎಂ. ಚಿದಾನಂದಮೂರ್ತಿ, ಪಗರಣ ಮತ್ತು ಇತರ ಪ್ರಬಂಧಗಳು, ಪು. ೧೧೮.
೧೦. ಎಫ್.ಟಿ. ಹಳ್ಳಿಕೇರಿ, ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು, ಇತಿಹಾಸ ದರ್ಶನ, ೨೦೦೫.
೧೧. ಎಂ.ಎಂ. ಕಲಬುರ್ಗಿ, ಮಾರ್ಗ-೪, ಪು. ೩೭೯.
೧೨. ಎಫ್.ಟಿ. ಹಳ್ಳಿಕೇರಿ, ಕಂಠಪತ್ರ-೨ ಪು. ೧೮೫.

• • •

# ಅಧ್ಯಾಯ ಮೂರು

# ಶಾಂತಮುತ್ತಯ್ಯನನ್ನು ಕುರಿತು ಸಾಹಿತ್ಯ

೩.೧. ತಗರ ಪಾವಡ

೩.೨. ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣ

೩.೩. ಚೆನ್ನಬಸವ ಕವಿಯ ಹಾಲುಮತ ಪುರಾಣ

೩.೪. ಜನಪದ ಹಾಲುಮತ ಮಹಾಕಾವ್ಯ

೩.೫. ಶ್ರೀಗುರು ಶಾಂತವಿಜಯ : ಪೌರಾಣಿಕ ನಾಟಕ

೩.೬. ಶಾಸನಗಳು

೧. ಶಿರವಾಳ ಶಾಸನ

೨. ತುರುವೆಕೆರೆ ತಾಮ್ರಶಾಸನ

# ಅಧ್ಯಾಯ ಮೂರು

# ಶಾಂತಮುತ್ತಯ್ಯನನ್ನು ಕುರಿತು ಸಾಹಿತ್ಯ

ಶಾಂತಮುತ್ತಯ್ಯನನ್ನು ಕುರಿತಂತೆ ಕಾವ್ಯ ಪುರಾಣಗಳಂಥ ಶಿಷ್ಟ ಸಾಹಿತ್ಯ, ಶಾಸನಗಳಂಥ ದಾಖಲು ಸಾಹಿತ್ಯ ರೂಪದಲ್ಲಿ ಕೃತಿಗಳು ರಚನೆಗೊಂಡಿವೆ. ಈತನ ಜೀವನವೃತ್ತಾಂತವನ್ನು ತಿಳಿಸುವ 'ತಗರ ಪವಾಡ' ಮಹತ್ವದ ಕೃತಿಯಾಗಿದೆ. ಹಾಗೆಯೇ ಆನುಷಂಗಿಕವಾಗಿ ಹಾಲುಮತೋತ್ತೇಜಕ ಪುರಾಣ, ಹಾಲುಮತ ಪುರಾಣ, ಜನಪದ ಹಾಲುಮತ ಪುರಾಣಗಳಲ್ಲಿ ಶಾಂತಮುತ್ತಯ್ಯನ ಜೀವನ ವಿವರಗಳಿವೆ. ಇವುಗಳಿಗೆ ಪೂರಕವಾಗಿ ತುರುವೆಕೆರೆ, ಶಿರವಾಳಗಳಲ್ಲಿ ಶಾಸನಶಿಲ್ಪಗಳು ಹಾಗೂ ತಾಮ್ರಪತ್ರಗಳಿವೆ. ಈ ಎಲ್ಲಾ ಆಕರಗಳ ಕುರಿತು ಇಲ್ಲಿ ಅವಲೋಕಿಸಲಾಗುವುದು.

## ೩.೧. ತಗರ ಪವಾಡ

"ಶಾಂತಮುತ್ತಯ್ಯನವರ ಬಗ್ಗೆ ಅಪೂರ್ವವಾದ ಮಾಹಿತಿಯನ್ನು ನೀಡುವ ಕೃತಿ 'ತಗರ ಪವಾಡ'. ಎಂಟು ಅಧ್ಯಾಯ ೬೪೯ ಸಾಂಗತ್ಯ ಪದಗಳನ್ನು ಒಳಗೊಂಡಿರುವ ಈ ಕೃತಿಯು ೨೦೦೪ರಲ್ಲಿ ಪ್ರಕಟ ವಾಗಿದೆ. ಚರಿತ್ರೆಯ ಪುರಾಣೀಕರಣ ವರ್ಗಕ್ಕೆ ಸೇರುವ ಈ ಕೃತಿಯು ಕುರುಬರ ಗುರು ಶಾಂತಮುತ್ತಯ್ಯ ನವರ ಜೀವನ ಚರಿತ್ರೆಯಾಗಿದೆ" ಎಂದು ಸಂಪಾದಕರು ಹೇಳಿರುವ ಮಾತು ಯಥಾರ್ಥವಾದುದಾಗಿದೆ.

"ಕೊಲ್ಲಾಪುರದ ಮಾಯೆ" ಎಂಬ ಹೆಸರಿನ ವೇಶ್ಯೆಗೆ ಮನಸೋತು ನವಕೋಟಿ ಸಿದ್ಧರು ಅವಳ ದಾಸರಾಗಿ ದುಡಿಯುತ್ತಿದ್ದರು. ನಾರದನಿಂದ ಈ ಸಂಗತಿಯನ್ನು ತಿಳಿದ ಶಿವನು ವಿಟನಾಗಿ ಬಂದು ಆ ವೇಶ್ಯೆಯನ್ನು ಜಯಿಸಿ ನವಕೋಟಿ ಸಿದ್ಧರಿಗೆ ಕುರಿಗಳಾಗಲು ಶಪಿಸಿ, ಅವುಗಳನ್ನು ಕಾಯುತ್ತ ತೊಗರ್ಸಿ ಗ್ರಾಮಕ್ಕೆ ಬಂದು ಅಲ್ಲಿಯ ಒಕ್ಕಲಿಗ ಆದಿಗೊಂಡನ (ಹೆಂಡಿತ ಮಲ್ಲಮ್ಮ) ಹೊಲದ ಹುತ್ತಿನಲ್ಲಿ ಕುರಿಗಳನ್ನು ಹೊಗಿಸಿ ಕೈಲಾಸಕ್ಕೆ ಮರಳುತ್ತಾನೆ.

ಆದಿಗೊಂಡನ ಏಳು ಜನ ಮಕ್ಕಳಲ್ಲಿ ಕಿರಿಯವನಾದ ಪದ್ಮಗೊಂಡನು ಹೊಲದಲ್ಲಿಯ ಹುತ್ತವನ್ನು ಒಡೆಯಲಾಗಿ ಹೊರ ಬಂದ ಅಸಂಖ್ಯಾತ ಕುರಿಗಳನ್ನು ನೋಡಿ ಆಶ್ಚರ್ಯಪಡುತ್ತಾನೆ. ಶಿವನಿಂದ ಕಳಿಸಲ್ಪಟ್ಟ ಬೀರಯ್ಯನೆಂಬವನು ಇವನಿಗೆ ಕುರಿ ಕಾಯುವ ಕೆಲಸದಲ್ಲಿ ನೆರವಾಗುತ್ತಾನೆ. ಇವರು ದೂರದ ಪ್ರದೇಶಗಳಿಗೆ ಪ್ರಯಾಣಿಸುತ್ತಿರುವಲ್ಲಿ, ಮೇಯಿಸುತ್ತಿದ್ದ ಕುರಿಗಳನ್ನು ತಿನ್ನಲು ಬಂದ ಬಕಾಸುರನನ್ನು ಬೀರಯ್ಯ ಕೊಲ್ಲುತ್ತಾನೆ. ಪದ್ಮಗೊಂಡ ಅನಾಥೆಯಾದ ರಾಕ್ಷಸನ ಮಗಳು 'ಸಿರಿವಂತೆ'ಯನ್ನು ಮದುವೆಯಾಗಿ

(ಇಷ್ಟರಲ್ಲಿ ಪದ್ಮಣ್ಣನಿಗೆ ಲಿಂಗಮ್ಮ ಎಂಬುವವಳೊಂದಿಗೆ ಮದುವೆಯಾಗಿತ್ತು. ಅವರಿಗೆ ಶಾಂತಯ್ಯನೆಂಬ ಮಗನೂ ಹುಟ್ಟಿದ್ದ. ಅವರು ತೊಗರ್ಸಿಯಲ್ಲಿಯೇ ಇದ್ದರು) ಅವಳೊಂದಿಗೆ ಕುರಿ ಕಾಯುತ್ತಾ ದೂರ ದೂರ ಹೋಗಿ ಬಿಡುತ್ತಾನೆ.

ಇತ್ತ ಪದ್ಮಗೊಂಡನ ತಾಯಿ ಮಲ್ಲಮ್ಮ ತೊಗರ್ಸಿಯಲ್ಲಿ ಪದ್ಮಗೊಂಡ ಲಿಂಗಮ್ಮರ ಮಗ ಶಾಂತಯ್ಯನಿಗೆ ಪರವಿಗೊಂಡನ ಮಗಳು 'ದೇವಮ್ಮ'ನೊಂದಿಗೆ ಮದುವೆಯನ್ನು ಮಾಡುತ್ತಾಳೆ. ಅನೇಕ ವರ್ಷಗಳ ಬಳಿಕ ವೃದ್ಧ ಪದ್ಮಗೊಂಡ ಸಿರಿವಂತೆಯೊಂದಿಗೆ ಕುರಿ ಹಿಂಡು ಕಾಯುತ್ತಾ ತೊಗರ್ಸಿ ಗ್ರಾಮಕ್ಕೆ ಮರಳುತ್ತಾನೆ. ಒಂದು ರಾತ್ರಿ ಅಲ್ಲಿ ಉಳಿದು ಎಲ್ಲ ಆಸ್ತಿಯನ್ನು ಬಂಧುಗಳಿಗೆ ಬಿಟ್ಟು, ಹೆಂಡತಿಯರಾದ ಲಿಂಗಮ್ಮ - ಸಿರಿವಂತೆ, ಮಗ ಶಾಂತಯ್ಯರೊಂದಿಗೆ ತೊಗರ್ಸಿಯನ್ನು ತೊರೆದು ಹಿಂಡಿನೊಂದಿಗೆ ದೂರ ಹೋಗುತ್ತಾನೆ. ಅಲ್ಲಿ ತಂದೆ ಪದ್ಮಗೊಂಡನು ರಾಕ್ಷಸ ಜಾತಿಯ ಸಿರಿವಂತೆಯೊಂದಿಗೆ ಊಟ ಮಾಡುವುದು ಶಾಂತಯ್ಯನಿಗೆ ಸರಿ ಬರುವುದಿಲ್ಲ. ಆಗ

"ರಕ್ಕಸಿಯ ಕುಲದವಳೊಡನೆ ಭೋಜನ ಮಾಡೆ
ದಕ್ಕೂದೆ ತಿಂಬುವ ಅನ್ನ
ಅತ್ತಲು ಗುರು ನೀನೆ ಗತಿಯನುತಲಿ ಆ
ಚಿಕ್ಕಶಾಂತನು ಕಡೆಗಾದ" (ಸಂ. ೩, ಪ. ೩೨).

ತಂದೆಯ ಕುರಿಯ ಹಿಂಡಿನಲ್ಲಿ ಸಮಭಾಗವನ್ನು ಪಡೆದುಕೊಂಡು ಹೆಂಡತಿ ದೇವಮ್ಮನೊಂದಿಗೆ ತಂದೆಯಿಂದ ಬೇರೆಯಾಗಿ ಹೋಗಿ ಬಿಡುತ್ತಾನೆ. ಹೀಗೆ ತಂದೆಯಿಂದ ಬೇರೆಯಾದ ಶಾಂತಯ್ಯನು ಅಚಲ ನಿಷ್ಠೆಯಿಂದ ಶಿವಪೂಜೆಯಲ್ಲಿ ನಿರತನಾಗುತ್ತಾನೆ. ಆತನ ಭಕ್ತಿಗೆ ಮೆಚ್ಚಿದ ಶಿವನು ಅವನಲ್ಲಿಗೆ ಬರುತ್ತಾನೆ. ಹಾಗೆ ಬಂದ ಶಿವನ ಚಿತ್ರವನ್ನು ಕೃತಿ ಹೀಗೆ ನಿರೂಪಿಸುತ್ತದೆ.

"ಹಿಡಿದ ತ್ರಿಶೂಲ ಕಪ್ಪರ ಕಂಥೆ ಭಸಿತವು
ಜಡಿದ ರುದ್ರಾಕ್ಷಿ ಪಾವುಗೆಯು
ಕುಡಿಮೀಸೆ ಕಿಡಿಗಣ್ಣು ನಡೆವ ರೌದ್ರಾಕಾರ
ಒಡೆಯ ತಾ ಬಂದು ನಿಂದಿರಲು" (ಸಂ. ೩, ಪ. ೪೩).

ಹೀಗೆ ಶಾಂತಯ್ಯನಲ್ಲಿಗೆ ಬಂದ ಕೆಂಡಗಣ್ಣಿನ ರೇವಣಸಿದ್ಧನನ್ನು ಕಂಡು ದಂಪತಿಗಳು ಶ್ರದ್ಧೆ-ಭಕ್ತಿಯಿಂದ ಸತ್ಕರಿಸುತ್ತಾರೆ. ಆರೋಗಣೆಗೆ ಎಡೆಮಾಡುವ ವೇಳೆಗೆ ಶಿವನು ಕಂದನ ಭಕ್ತಿಯನ್ನು ಒರೆದು ನೋಡುವೆನೆಂದು ಜಂಗಮ ಕೋಟಿಯನ್ನು ಕರೆಯುತ್ತಾನೆ. ಹಾಗೆ ಬಂದ ಜಂಗಮ ಕೋಟಿಯನ್ನು ದಂಪತಿಗಳು ಪರಶಿವನ ಅನುಗ್ರಹದಿಂದ ಸಂತೃಪ್ತಿಪಡಿಸುತ್ತಾರೆ. ಶಾಂತಯ್ಯನ ಭಕ್ತಿಯಿಂದ ಸಂತೋಷಗೊಂಡ ಶಿವನು (ರೇವಣಸಿದ್ಧ) ಶಾಂತಯ್ಯನಿಗೆ "ಏನು ಬೇಕು ಬೇಡು" ಎಂದು ಕೇಳುತ್ತಾನೆ. ಅದಕ್ಕೆ ಶಾಂತಯ್ಯನು "ಏನು ಬೇಡಲಿ ದೇವ ನೀನಿತ್ತ ಭಾಗ್ಯವು ಎನಗೆ ಕಡಿಮೆಯಿಲ್ಲ. ಆದರೆ ಮೋಕ್ಷ ದೀಕ್ಷೆಗಳಿಲ್ಲದೆ ತಾನಿರುವುದು ಸಮ್ಮತವೇ?" ಎಂದು ದೀಕ್ಷೆಗಾಗಿ ಅಂಗಲಾಚಿ ಬೇಡಿಕೊಳ್ಳುತ್ತಾನೆ. ಅವನ ಭಕ್ತಿಗೆ ಮೆಚ್ಚಿದ

ಶಿವನು (ರೇವಣಸಿದ್ಧನು) ಪಂಚ ಕಳಶಗಳನ್ನು ಹೂಡಿ ಶಾಂತಯ್ಯನಿಗೆ ದೀಕ್ಷೆಯನ್ನು ನೀಡುತ್ತಾನೆ. ಆದೇ ಸಮಯದಲ್ಲಿ ಕೈಲಾಸದಿಂದ ಕರಿಮಲ್ಲಿಗೆ ಸರ ಸುರಿದುದರಿಂದ ಅದು 'ಸರವೂರು' ನಾಮದಿಂದ ಪ್ರಸಿದ್ಧ ವಾದ ಕ್ಷೇತ್ರವಾಗುತ್ತದೆ.

ಇತ್ತ ಕಿನ್ನರಿ ಬ್ರಹ್ಮಯ್ಯ ಸಾಕಿದ ತಗರು 'ಶಂಭು' ಎಂಬ ಹೆಸರಿನಿಂದ ಮರೆಯುತ್ತ ಚೇಷ್ಟೆಯಿಂದ ಆಗಾಗ ದೇವರ ಪೂಜೆಯ ಅಲಂಕಾರವನ್ನು ಕೆಡಿಸತೊಡಗುತ್ತದೆ. ಇದರಿಂದ ಬೇಸತ್ತು ಬ್ರಹ್ಮಯ್ಯ ಅದಕ್ಕೆ ಲಿಂಗ ಮುದ್ರೆಯನ್ನು ಹಾಕಿ, ಸರೂರಿಗೆ ತಂದು ಭಕ್ತ ಶಾಂತಯ್ಯನಿಗೆ ಅದರ ಜವಾಬ್ದಾರಿಯನ್ನು ಹೊರಿಸಿ ಅವನ ಕುರಿಯ ಮುಂದೆಯಲ್ಲಿ ಬಿಟ್ಟು ಹೋಗುತ್ತಾನೆ.

ಕಲ್ಯಾಣ ಪಟ್ಟಣದಲ್ಲಿ ವಾಸವಾಗಿದ್ದ ಶರಣ ಸಂಪ್ರದಾಯದ ಕುರುಬರು ಶರಣರಿಗೆ ಹಾಲು ಮೊಸರು ಮಾರುವ ಶೆಟ್ಟಿ ವೃತ್ತಿಯನ್ನು ಕೈಗೊಂಡಿರುತ್ತಾರೆ. ಶಿವನು ಶಿದ್ಧಶೆಟ್ಟಿ ಮಲ್ಲಿಶೆಟ್ಟಿ ರೂಪ ಧರಿಸಿ ಸಮೀಪದ ಕಟವಾಡಿ ಗ್ರಾಮದವರು ಎಂದು ಹೇಳಿಕೊಳ್ಳುತ್ತಾ ಅದೇ ಪೇಟೆಯಲ್ಲಿ ಹಾಲು ಮೊಸರು ಮಾರಾಟದಲ್ಲಿ ನಿರತರಾಗಿದ್ದರು. ಒಮ್ಮೆ ಕುರುಬರು ಹಾಲಕಂಬಿಯ ಮೇಲೆ ಸತ್ತ ಕುರಿಯನ್ನು ಹೊತ್ತು ತಂದು ಮಾರಲು ಶರಣರು ಪೇಟೆ ಅಪವಿತ್ರವಾಯಿತೆಂದು ಪ್ರತಿಭಟಿಸಿದರು. ಈ ಕಾರಣಕ್ಕಾಗಿ ಕುರುಬರನ್ನು 'ರಟ್ಟಮತ'ದವರೆಂದು ಕಲ್ಯಾಣ ಪಟ್ಟಣದಿಂದ ಹೊರಹಾಕುತ್ತಾರೆ. ಇದರಿಂದ ಕುರುಬರು ಅಸ್ಪೃಶ್ಯರಂತೆ ಅಡವಿಯಲ್ಲಿ ಬಾಳತೊಡಗಿದರು.

ಹೀಗೆ ಅಡವಿಯಲ್ಲಿ ಅಸ್ಪೃಶ್ಯರಂತೆ ಬಾಳುತ್ತಿರುವ ಕುರುಬರನ್ನು ಕುಲವಂತರನ್ನಾಗಿ ಮಾಡಲು ಶಿವನು ಸಿದ್ಧಶೆಟ್ಟಿಯ ರೂಪದಲ್ಲಿ ಬರುತ್ತಾನೆ. ಅಲ್ಲಿಗೆ ಕುರುಬರೆಲ್ಲ "ಒಡೆಯನೆಂಬವರಿಲ್ಲ ಹಿಡಿದರೆ ಕೊಂಬಿಲ್ಲ ಪೊಡವಿಯೊಳಗೆ ಎಮಗ್ಯಾರುಯಿಲ್ಲ ಕಡು ಪಾಪಿಗಳಾಗಿ ತಿರುಗುತಿಹೆವು" ಎಂದು ತಮ್ಮ ಸಂಕಟವನ್ನು ಅವನ ಮುಂದೆ ಹೇಳಿಕೊಳ್ಳುತ್ತಾರೆ. ಆಗ ಸಿದ್ಧಶೆಟ್ಟಿಯು ಇಲ್ಲಿಗೆ ಹನ್ನೆರಡು ಯೋಜನದಲ್ಲಿ ಇರುವ 'ಸರವೂರ' ಎಂಬ ಗ್ರಾಮದಲ್ಲಿ ಶರಣ ಶಾಂತಯ್ಯನೆಂಬವನಿರುವನು. ಅವನಿಗೆ ಮೊರೆಹೊಕ್ಕು ಕುಲೀನರಾಗಲು ಸಿದ್ಧಶೆಟ್ಟಿಯು ಅವರಿಗೆ ತಿಳಿಸುತ್ತಾನೆ. ಆಗ ಕುರುಬ ಪ್ರಮುಖರಾದ ಸಿದ್ದೇಗೌಡ, ರಾಮೇಗೌಡ, ಲಕ್ಕೇಗೌಡ, ರಾಮಣ್ಣಗೌಡ ಮುಂತಾದ ಗೌಡ ಪ್ರಮುಖರೆಲ್ಲ ಸರೂರು ಶಾಂತಮುತ್ತಯ್ಯ ನಲ್ಲಿಗೆ ಬರುತ್ತಾರೆ, ತಮ್ಮ ಸಂಕಷ್ಟವನ್ನು ಹೀಗೆ ಹೇಳಿಕೊಳ್ಳುತ್ತಾರೆ.

"ಒಂದು ದಿನದಿ ಸತ್ತಕುರಿಯ ಕಂಬಿಯ ಮೇಲೆ
ಬಂದಿಸಿ ತಂದರೆಮ್ಮವರು
ತಂದು ಮೊಸರು ಮಾರುತಿರಲು ನಮ್ಮವರೆಲ್ಲ
ಬಂದಿತು ಕೇಡು ಕೇಳೊಡೆಯ."॥

"ಕುರುಬರರಾದವರೆಲ್ಲ ಕುಲಕೆ ಹೊರಗು ಎಂದು
ಹೊರಡಿಸಿ ಹನ್ನೆರಡೊರುಷ
ಹೊರಗೆ ಕಾಲವ ಕಳೆಯಲು ಒಬ್ಬಶರಣನು
ಗುರುತು ಕೊಟ್ಟನು ನಿಮ್ಮ ಬಳಿಗೆ" (ಸಂ. ೬, ಪ. ೪೯-೫೦).

ಹಾಲ ಕಂಬಿಯ ಮೇಲೆ ಸತ್ತ ಕುರಿಯನ್ನು ಹೊತ್ತು ಮಾರಿದ ಪ್ರಮಾದಕ್ಕೆ ಹನ್ನೆರಡು ವರ್ಷ ಬಹಿಷ್ಕಾರದ ಶಿಕ್ಷೆಗೆ ಒಳಗಾಗಿದ್ದೇವೆ. ಈ ಬಹಿಷ್ಕಾರದ ಸಂಕಷ್ಟದಿಂದ ನಮ್ಮನ್ನು ಪಾರು ಮಾಡಿ ಕುಲದ ಗೌರವ ಉಳಿಸು ಒಡೆಯ ಎಂದು ಬೇಡಿಕೊಳ್ಳುತ್ತಾರೆ. ಅಷ್ಟರಲ್ಲಿಯೇ ಒಬ್ಬ ತುರುಕಾರ ಎಂಬ ಕಿನ್ನರಿ ಬ್ರಹ್ಮಯ್ಯನ ತಗರು ಸತ್ತಿರುವ ಸುದ್ದಿಯನ್ನು ಹೇಳುತ್ತಾನೆ. ಆಗ ಶಾಂತಮುತ್ತಯ್ಯನು ಸತ್ತಿರುವ ತಗರವನ್ನು ಅಲಂಕರಿಸಿಕೊಂಡು ಪುಷ್ಪಕದಲ್ಲಿರಿಸಿಕೊಂಡು ಮೆರವಣಿಗೆಯಲ್ಲಿ ಸಕಲ ಕುರುಬ ಗೌಡರೊಂದಿಗೆ ಕಲ್ಯಾಣಕ್ಕೆ ಬರುತ್ತಾನೆ. ಸತ್ತ ತಗರನ್ನು ಪುಷ್ಪಕದಲ್ಲಿ ಹೇರಿಕೊಂಡು, ಕಲ್ಯಾಣದ ರಾಜ ಬೀದಿಯಲ್ಲಿ ಮೆರವಣಿಗೆಯನ್ನು ಮಾಡುತ್ತ ಬರುತ್ತಿರುವಾಗ ಅದನ್ನು ಮಲ್ಲಿಶೆಟ್ಟಿಗಳು -

"ಸತ್ತಮೇಷನ ಹೊತ್ತುಕೊಂಡೊರ ಹೊರಗೆ
ಹೊತ್ತುಕೊಂಡ್ಹೋಗೊಂದು ಸಹಜ
ಸತ್ತಕುರಿ ಹೊತ್ತುಕೊಂಡು ಪೇಟೆಯೊಳಗೆ
ಹೊತ್ತು ತರುವರೇನೆ ಹೇಳಿ" (ಸಂ. ೬, ಪ. ೬೮)

ಎಂದು ತಕರಾರನ್ನು ತೆಗೆದು ಅದನ್ನು ತಡೆಯುತ್ತಾರೆ. ಆಗ ಶಾಂತಮುತ್ತಯ್ಯ ಅವರಾಡಿದ ಮಾತುಗಳನ್ನು ಕೇಳಿ ಘುಡುಘುಡಿಸುತ್ತ -

"ಎಮ್ಮ ಒಡೆಯ ರೇವಣಸಿದ್ಧನರಿಕೆಯು
ಚೆನ್ನತಗರ ಪವಾಡವನು
ನಿರ್ಣಯಿಸದಿದ್ದರೆ ನಿಮ್ಮ ಚರಣ ಸೇವಕನಲ್ಲ
ಇನ್ನು ಛೇದಿಸುವೆನು ಶಿರವ" (ಸಂ. ೬, ಪ. ೭೦)

ಎಂದು ತಗರ ಪವಾಡವನ್ನು ಮೆರೆಯುವ ಪ್ರತಿಜ್ಞೆಯನ್ನು ಮಾಡಿ, ತ್ರಿಪುರಾಂತಕ ದೇವಾಲಯಕ್ಕೆ ತರುತ್ತಾನೆ. ಈ ಸುದ್ಧಿಯನ್ನು ತಿಳಿದು ಪವಾಡವನ್ನು ನೋಡಲು ಅರಸ ಬಿಜ್ಜಳ, ಮಂಚಣ್ಣ, ಬಸವಣ್ಣ, ಸಿದ್ಧರಾಮ ಮತ್ತು ಅಸಂಖ್ಯಾತ ಶರಣರೆಲ್ಲ ನೆರೆಯುತ್ತಾರೆ. ಬಿಜ್ಜಳನು ಇಂದು ಸತ್ತಿರುವ ತಗರನ್ನು ಎಬ್ಬಿಸದಿದ್ದರೆ ನಿಮ್ಮನ್ನೆಲ್ಲ ಗಾಣದಲ್ಲಿ ಹಾಕಿ ಅರಸುತ್ತೇನೆ ಎಂದು ಹೇಳುತ್ತಾನೆ. ಅಲ್ಲಿದ್ದ ಶರಣರು ಭಯದಿಂದ ಬಸವಣ್ಣನವರ ಮುಖವನ್ನು ನೋಡುತ್ತಾರೆ. ಆಗ ಬಸವಣ್ಣನು -

"ಹೆತ್ತವರ್ಹೆಸರಿಡುವುದು ಸಹಜವು
ಪುತ್ರಗನೂರು ಹೆಸರಿಡರು
ಚಿತ್ತಜಾರಿಯ ಭಕ್ತ ಶಾಂತಯ್ಯ ಹೊರತಾಗಿ
ಮತ್ತೋರ್ವರಿಂದ ಆಗುವುದೇ" (ಸಂ. ೭, ಪ. ೧೦)

ಎಂದು ನುಡಿದು ಬಸವಣ್ಣ ಶಾಂತಯ್ಯನ ಹಣೆಗೆ ವಿಭೂತಿಯನ್ನು ಹಚ್ಚುತ್ತಾನೆ. ಆಗ ಶಾಂತಯ್ಯನು ಶಿವನನ್ನು ಸ್ತುತಿಸಿ ಮೇಷನಿಗೆ ವಿಭೂತಿಯನ್ನು ಹಚ್ಚಿ, ತೀರ್ಥ ಪ್ರಸಾದವನ್ನು ಚೆಲ್ಲಿ ಮೈದಡವಿದಾಗ ತಗರು ಜೀವ ತಳೆದುಕೊಂಡು ಮೇಲೆ ಎದ್ದಿತು. ಅಲ್ಲಿರುವ ಶರಣರೆಲ್ಲ ಶಾಂತಮುತ್ತಯ್ಯನನ್ನು ಹೊಗಳುತ್ತಾರೆ. ಬಿಜ್ಜಳನು ಶರಣರ ಮಹಿಮೆಯನ್ನು ಅರಿಯದೆ ಹುಚ್ಚನಂತೆ ಆಡಿದನೆಂದು ಪಶ್ಚಾತ್ತಾಪ ಪಡುತ್ತಾನೆ.

ಅಲ್ಲಿರುವ ಜನರೆಲ್ಲರೂ ಉತ್ಸಾಹದಿಂದ ಕುಣಿದಾಡುತ್ತಾರೆ. ಅದೇ ಸಂದರ್ಭದಲ್ಲಿ ಬಸವಣ್ಣನು ಶಾಂತ ಮುತ್ತಯ್ಯನನ್ನು ಮುದ್ದಾಡಿ "ಮಗನೇ ಬೇಕಾದುದನ್ನು ಕೇಳು ಕೊಡುತ್ತೇನೆ" ಎಂದು ಕೇಳುತ್ತಾನೆ. ಆಗ ಶಾಂತಮುತ್ತಯ್ಯನು "ಏನು ಕೇಳಲಿ ದೇವ ನಿಮ್ಮ ಕಟಾಕ್ಷದಿಂದ ನನಗಾವ ಕೊರತೆಯೂ ಇಲ್ಲ. ಆದರೆ ಒಂದು ಸಣ್ಣ ಪ್ರಮಾದದಿಂದ ಅಸ್ಪೃಶ್ಯರಂತೆ ಬಾಳುವ ಕುರುಬ ಕುಲದವರನ್ನು ಉದ್ಧರಿಸು" (ಸಂ. ೭, ಪು. ೩೩) ಎಂದು ಬೇಡಿಕೊಳ್ಳುತ್ತಾನೆ. ಶಾಂತಯ್ಯನ ಮಾತನ್ನು ಆಲಿಸಿದ ಬಸವಣ್ಣ "ಸಕಲ ಕುರುಬರನ್ನೆಲ್ಲ ಕರೆಸಿ ಅವರಿಗೆಲ್ಲ ಭಸಿತವನ್ನು ಧರಿಸಿ ಉಡುಗೊರೆಯನ್ನು ಕೊಟ್ಟು ಹಾಲುಕುಲದವರೆಂದೆನಿಸಿ ಸುಖದಿಂದ ಬಾಳಿರಿ" ಎಂದು ಹರಸುತ್ತಾನೆ. ಹಾಗೆಯೇ -

"ಹಾಲುಮತದ ಕುಲದವರ್ಗೆಲ್ಲ ಶಾಂತಯ್ಯ
ಲೋಲ ನೀನೇ ಗುರುವಾಗಿ
ಭೂಲೋಕದೊಳು ಕೀರ್ತಿವಂತನೆನಿಸಿಕೊಂಡೆ
ಮೇಲಾಗಿ ಕುಲವನ್ನುದ್ಧರಿಸಿ" (ಸಂ. ೭, ಪ. ೩೮)

ಎಂದು ಹೇಳುತ್ತ ಬಸವಣ್ಣನು ಶಾಂತಯ್ಯನ ಹಣೆಗೆ ವಿಭೂತಿಯನ್ನು ಹಚ್ಚಿ "ಹಾಲಕುಲದವರ್ಗೆಲ್ಲ, ನೀನು ಗುರುವಾಗು" ಎಂದು ಸಾರಿದ ಶಾಂತಯ್ಯನು ಕುರುಬ ಕುಲಕ್ಕೆ ಎನ್ನನು ಒಡೆಯನನ್ನಾಗಿ ಮಾಡಿದ್ದಕ್ಕೆ ಕುರುಹು ಏನು ಎಂದು ಕೇಳುತ್ತಾನೆ. ಅದಕ್ಕೆ ಬಸವಣ್ಣ "ಮೂರು ಲೋಕಕ್ಕೆ ಪ್ರಜ್ವಲಿಸುತಿಹ ಕುಲವೆಂದು ಮೂರೇಣಿನ ಕಂಥೆ"ಯನ್ನು ಇತ್ತು (ಸಂ. ೭, ಪು. ೪೬) ಶಾಂತಯ್ಯನಿಗೆ ಹೀಗೆ ಹೇಳುತ್ತಾನೆ.

"ಕಲ್ಲಿನೊಳಗೆ ಲಿಂಗ ಹುಟ್ಟಿದ ಮರಿಯಾದೆ
ಯಲ್ಲಿರಬೇಕು ಭಕ್ತಿಯೊಳು
ಜಲದೊಳು ತಾವರೆ ಹುಟ್ಟಿದ ಮರಿಯಾದೆ
ಅಲ್ಲಲ್ಲೆ ಪೂಜ್ಯುಂಟು ನಿಮಗೆ" (ಸಂ. ೭, ಪ. ೪೭)

ಕಲ್ಲಿನಲ್ಲಿಯೇ ಲಿಂಗವು ಹುಟ್ಟಿದರೂ ಕೂಡ ದೈವತ್ವ ಸ್ವರೂಪವನ್ನು ಪಡೆದು ಜನರಿಂದ ಪೂಜೆಗೊಳ್ಳುವಂತೆ, ಕುರುಬ ಕುಲದಲ್ಲಿ ಹುಟ್ಟಿದ ನಿನಗೆ ಕುರುಬರಲ್ಲಿಯೇ ವಿಶೇಷ ಮನ್ನಣೆ ಪೂಜ್ಯತೆ ಉಂಟು ಎಂದು ಹೇಳುವ ಮಾತುಗಳು ಅರ್ಥಪೂರ್ಣವಾದವುಗಳಾಗಿವೆ. ಜಲದ ತಾವರೆ ಎಂಬುದು ಒಡೆಯರ ಪರಿಶುದ್ಧಿ ಯನ್ನು ಹೇಳುತ್ತದೆ. ಹೀಗೆ ಪವಾಡ ಮೆರೆದ ಶಾಂತಯ್ಯನನ್ನು ಬಿಜ್ಜಳ ಅರಮನೆಗೆ ಬರಮಾಡಿಕೊಂಡು ಗೌರವಿಸಿದ ನಂತರ ಶಾಂತಯ್ಯನು ಬಸವಣ್ಣ ಮೊದಲಾದ ಶರಣರನ್ನು ಕೂಡಿಕೊಂಡು ಸರೂರಿಗೆ ಬರುತ್ತಾನೆ. ಅಲ್ಲಿಗೆ ಬಂದ ಶರಣರನ್ನು ಜಂಗಮರನ್ನು ಶಾಂತಯ್ಯ ಹಾಲು ತುಪ್ಪದಿಂದ ಸಂತೃಪ್ತಿಗೊಳಿಸು ತ್ತಾನೆ. ಶಾಂತಯ್ಯನ ಉಪಚಾರದಿಂದ ಸಂತಸಗೊಂಡ ಬಸವಣ್ಣ ಕಲ್ಯಾಣಕ್ಕೆ ಮರಳಿ ಬರುವಾಗ ಮತ್ತೊಮ್ಮೆ "ನಿಮ್ಮ ಕುಲಕ್ಕೆ ನೀನು ಗುರುವಾಗಿ ಸ್ಥಿರ ಕಾಲ ಸಮ್ಮಾನದಲಿ ಬಾಳು" (ಸಂ. ೮, ಪ. ೬೦) ಎಂದು ಶಾಂತಯ್ಯನಿಗೆ ಹರಸುತ್ತಾನೆ. ಕುಲದವರಿಗೆ ಕುಲ ಗುರುಗಳಿರುವುದು ಕುರುಬರಲ್ಲಿ ಮಾತ್ರ. ಅದನ್ನೇ ಬಸವಣ್ಣ ಮೇಲಿನ ಮಾತಿನಲ್ಲಿ ಹೇಳಿದ್ದಾನೆ ಎನಿಸುತ್ತದೆ. ನಂತರ ಶಾಂತಯ್ಯನು ನೆರೆದಿರುವ ಕುರುಬ ಗೌಡರಿಗೆಲ್ಲ "ಕರುಣವುಳ್ಳವರು ನೀವು ಬಹಳ ಕಷ್ಟವನ್ನು ಪಟ್ಟಿರಿಯೆಂದು ಉಡುಗೊರೆಯನ್ನು ಕೊಟ್ಟು

ಕಳುಹಿಸುತ್ತಾನೆ. ಬಹುಶಃ ಗುರುತನ ದೊರಕಿದುದರ ಸಂಕೇತವೋ ಎಂಬಂತೆ ಕುರುಬರು ತಮ್ಮ ಗುರು ರೇವಣ್ಣಸ್ವಾಮಿಗೆ 'ಕಂಥೆ ಮಡುಗುವ ಆಚರಣೆಯೊಂದನ್ನು ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಆಚರಿಸುವ ಪದ್ಧತಿಯುಂಟು. "ಕಂಥೆ ಸೇವೆಗೆ ಬಂದ ಕುರುಬರಿಗೆಲ್ಲ ಉಡುಗೊರೆ ಕೊಟ್ಟು ಕಳಹಿಸುವ ಪದ್ಧತಿಯು ಇರುವುದನ್ನು ಈಗಲೂ ಕಾಣಬಹುದು. ಇಲ್ಲಿಗೆ ಈ ಕಥೆ ಮುಕ್ತಾಯವಾಗುತ್ತದೆ."[9]

ಪ್ರಸ್ತುತ 'ತಗರ ಪವಾಡ' ಕೃತಿಯ ಅಧ್ಯಯನವು ಕುರುಬರ ಮತ್ತು ಅವರ ಗುರುವರ್ಗದ ಬಗ್ಗೆ ಹಲವಾರು ಚಾರಿತ್ರಿಕ ಅಂಶಗಳನ್ನು ಅನಾವರಣಗೊಳಿಸುತ್ತದೆ. ಈ ಕೃತಿಯ ನಾಯಕ 'ಸರವೂರು ಶಾಂತ ಮುತ್ತಯ್ಯ'ನೆಂಬುದು ಖಚಿತವಾಗಿದೆ. ಈತನು ಉಂಡಾಡು ಪದ್ಮಣ್ಣನ ಮೊದಲ ಹೆಂಡತಿ ಲಿಂಗಮ್ಮನ ಮಗ. ಉಂಡಾಡು ಪದ್ಮಣ್ಣನ ಮೊದಲನೆಯ ಹೆಂಡತಿಯ ಮಕ್ಕಳು 'ಹತ್ತಿ ಕಂಕಣದವರೆಂದೂ, ಎರಡನೆಯ ಹೆಂಡತಿಯ ಮಕ್ಕಳು 'ಉಣ್ಣೆ ಕಂಕಣ'ದವರೆಂದೂ ಕುರುಬರಲ್ಲಿಯ ಕಂಕಣದ ಭೇದವನ್ನು ಈ ಕೃತಿಯು ದಾಖಲಿಸುತ್ತದೆ. ಉಂಡಾಡು ಪದ್ಮಣ್ಣನ ಮಗನಾದ ಒಬ್ಬ ಮಹಾನ್ ಶಿವಭಕ್ತ. ಸಿದ್ಧ ಪುರುಷನೆಂಬುದು ಒಂದು ಕರಗ ಅಂಬಲಿಯಲ್ಲಿ ಒಂಬತ್ತು ಲಕ್ಷ ಜಂಗಮರಿಗೆ ಪ್ರಸಾದವನ್ನು ಮಾಡಿಸುವುದು, 'ಚಕೋರ ಹೊಳೆ'ಯಲ್ಲಿ ನಿಂತು ಧ್ಯಾನ ಮಾಡುವಾಗ, ತೊಡರು ಮಾಡಲು ಬಂದ ಬಂಡಿಗಳನ್ನೆಲ್ಲಾ ನುಚ್ಚನೂರಾಗಿಸಿ ಮತ್ತೆ ಅವುಗಳನ್ನೆಲ್ಲಾ ಒಂದಾಗಿಸಿ, ಬಂಡಿಕಾರರಿಂದ ಶಿವನಿಗಾಗಿ ಒಂದು ದೇವಾಲಯವನ್ನು ನಿರ್ಮಿಸಿದ ಪ್ರಸಂಗಗಳಿಂದ ಸ್ಪಷ್ಟವಾಗುತ್ತದೆ. ಆತನ ಭಕ್ತಿಗೆ ಮೆಚ್ಚಿದ ಶಿವನು ದರ್ಶನವನ್ನು ನೋಡಿ ದೀಕ್ಷೆಯನ್ನು ಕೊಡುತ್ತಾನೆ. ಆತನ ದೀಕ್ಷೆಯ ಸಮಯದಲ್ಲಿ ಕರಿಯ ಮಲ್ಲಿಗೆ ಸರಗಳು ಸುರಿದಿರುವುದರಿಂದ ಅದು ಪ್ರಸಿದ್ಧವಾದ 'ಸರವೂರು' ಕ್ಷೇತ್ರವಾಯಿತೆಂದು ಸರವೂರಿಗೆ ಆ ಹೆಸರು ಬಂದಿರುವುದರ ಬಗ್ಗೆ ಹೇಳಲಾಗಿದೆ. ಪ್ರಸ್ತುತ ಕೃತಿಯು ಶಿವನನ್ನು ಮತ್ತು ರೇವಣಸಿದ್ಧನನ್ನು ಅಭಿನ್ನವಾಗಿ ಭಾವಿಸಿರುವುದರಿಂದ ಶಾಂತಯ್ಯನಿಗೆ ದೀಕ್ಷೆಯನ್ನು ನೀಡಿದವನು ಶಿವನೋ ಅಥವಾ ರೇವಣಸಿದ್ಧನೋ ಎಂಬ ಸಂದೇಹ ಮೂಡುತ್ತದೆ. ಆದರೆ ರಸ್ತಾಪುರ ಭೀಮಕವಿಯ "ಹಾಲಮತೋತ್ತೇಜಕ ಪುರಾಣವು ಶಾಂತಯ್ಯನಿಗೆ ದೀಕ್ಷೆಯನ್ನು ನೀಡಿದವನು ರೇವಣಸಿದ್ಧನೆಂದು ಸ್ಪಷ್ಟವಾಗಿ ಹೇಳುವುದರಿಂದ ಮತ್ತು ಒಡೆಯರುಗಳು ಕೂಡ ಇದೇ ಅಭಿಪ್ರಾಯವನ್ನು ಹೇಳುವುದರಿಂದ ಶಾಂತಯ್ಯನಿಗೆ ದೀಕ್ಷೆಯನ್ನು ನೀಡಿದವನು ರೇವಣಸಿದ್ಧನೆಂದು ಹೇಳಬಹುದು. ಇದು ಈ ಕೃತಿಯ ಪ್ರಮುಖ ಸಂಗತಿಯಾಗಿದೆ. ಕಲ್ಯಾಣ ಪಟ್ಟಣದೊಳಗೆ ಹಾಲಕಂಬಿಯ ಮೇಲೆ ಸತ್ತ ಕುರಿಯನ್ನು ಹೊತ್ತು ಮಾರಿದ ಪ್ರಮಾದಕ್ಕೆ ಹನ್ನೆರಡು ವರುಷ ಬಹಿಷ್ಕಾರಕ್ಕೆ ಒಳಗಾದ ಕುರುಬರನ್ನು ಬಿಜ್ಜಳ, ಬಸವಣ್ಣ ಮುಂತಾದ ನೆರೆದ ಜನ ಸಮ್ಮುಖದಲ್ಲಿ ಸತ್ತಿರುವ ತಗರನ್ನು ಬದುಕಿಸಿ ತಗರ ಪವಾಡ ಮೆರೆದು ಬಹಿಷ್ಕಾರಕ್ಕೆ ಒಳಗಾದ ಕುರುಬರನ್ನು ಮತ್ತೆ ಕಲ್ಯಾಣ ಪಟ್ಟಣದೊಳಗೆ ಬರುವಂತೆ ಮಾಡುತ್ತಾನೆ. ಅದೇ ಸಂದರ್ಭದಲ್ಲಿ ಬಸವಣ್ಣನವರು "ಕುರುಬ ಕುಲಕ್ಕೆ ಒಡೆಯನ್ನನ್ನಾಗಿ ಮಾಡಿ, ಅವರ ಕುರುಹಾಗಿ ಮೂರೇಣಿನ ಕಂಥೆಯನ್ನು ನೀಡಿ" ಶಾಂತಯ್ಯನನ್ನು ಕುರಿತು ಆಡುವ ಮಾತುಗಳು ಅವನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

### ೩.೨. ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣ

ರಸ್ತಾಪುರ ಭೀಮಕವಿಯ "ಹಾಲುಮತೋತ್ತೇಜಕ ಪುರಾಣವು ೯ ಸಂಧಿ, ೫೯೮ ವಾರ್ಧಕ ಷಟ್ಪದಿಯನ್ನೊಳಗೊಂಡ ಈ ಕೃತಿ ರೇವಣಸಿದ್ಧೇಶ್ವರ, ಶಿವಪದ್ಮ, ಬೀರೇಶ್ವರ, ಗೊಲ್ಲಾಳೇಶ್ವರ ಮತ್ತು ಮಾಳಿಂಗರಾಯರ ವೃತ್ತಾಂತವನ್ನು ನಿರೂಪಿಸುತ್ತದೆ. ಪ್ರತಿ ಸಂಧಿಯ ಆರಂಭದ ಅರ್ಧ ವಾರ್ಧಕ ಷಟ್ಪದಿ ಸೂಚನೆಯಲ್ಲಿ ಆಯಾ ಸಂಧಿಯ ಕಥೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ಹಾಗೆ ಪ್ರತಿಸಂಧಿಯ ಮೊದಲನೇ ಪದ್ಯದಲ್ಲಿ ಕವಿಯು ಶಿವನನ್ನು ನಾನಾ ರೀತಿಯಾಗಿ ಸ್ತುತಿಸಿದ್ದಾನೆ.

ಈ ಕೃತಿಯಲ್ಲಿ ಶಾಂತಮುತ್ತಯ್ಯನವರನ್ನು ಕುರಿತು ಬಂದಿರುವ ಸಂಗತಿಗಳನ್ನು ಹೀಗೆ ಸಂಗ್ರಹಿಸಬಹುದು. "ಶಿವನಿಂದ ಶಾಪಕ್ಕೆ ಒಳಗಾದ ರೇಣುಕರು ಕೊಲ್ಲಿಪಾಕಿಯ ಸೋಮೇಶ್ವರಲಿಂಗದಿಂದ ಉದ್ಭವಿಸಿ ರೇವಣಸಿದ್ಧನೆಂಬ ಹೆಸರಿನಿಂದ ದೇಶ ಪರ್ಯಟನೆಯನ್ನು ಮಾಡುತ್ತ ಸರೂರ ಸೀಮೆಗೆ ಬರುತ್ತಾನೆ. ಅಲ್ಲಿ ಕುರಿಯ ಹಿಂಡನ್ನು ಮೇಯಿಸುತ್ತಿರುವ 'ಶಾಂತಮುತ್ತಯ್ಯ'ನೆಂಬ ಶಿವಭಕ್ತನಿರುತ್ತಾನೆ. ಈ ಶಾಂತಮುತ್ತಯ್ಯನಿಗೆ ಸುಂದರಾಕಾರದ ಸೋಯಿಮುತ್ತಯ್ಯ, ಜಗಮುತ್ತಯ್ಯ, ಲಲಿತಮುತ್ತಯ್ಯ ಎಂಬ ಮೂರು ಜನ ಮಕ್ಕಳಿರುತ್ತಾರೆ. ಅವರು ಅಪಾರವಾದ ಕುರಿಯ ಹಿಂಡನ್ನು ಸಲಹುತ್ತ ಆನಂದದಿಂದ ಇರುತ್ತಿರುವಾಗ;

> "ತುರುಗಳಪಾಲಿಸುತ್ತುಲ್ಲಾಸದಂದೆ ಸಂ
> ಚರಿಸಿ ಕಲ್ಲಿನ ಕೆರೆಯ ಭಾಗದಲ್ಲಿ ನಿಲಯಮಂ
> ವಿರಚಿಸುತ ಪ್ರೇಮದಿಂಚರರಿಂಗೆ ಪನ್ನೆರಡು ಕಂಬಿ ಪಾಲ್ಗೊಟ್ಟು ಸತತ
> ಹರುಷದಿಂದಿರಲಿಲ್ಲಗಭಸುತೆ ಸಿದ್ಧೇಂದ್ರ
> ನಿರದೆ ಬಂದವೃತಮಂ ನೀಡೇಂದು ಸಮ್ಮೋಹ
> ವೆರಸಿ ನಿಲ್ಲಲು ಶಾಂತಮುತ್ತಯ್ಯ ಕಂಡು ಪದಪದ್ಮಕಭಿವಂದಿಸಿದನು" (ಹಾ. ಪ. ೨-೧೩).

ಪ್ರತಿನಿತ್ಯ ಹನ್ನೆರಡು ಕಂಬಿ ಹಾಲನ್ನು ಹಿಂಡಿ ಅದನ್ನು ಬೇಡಿದವರಿಗೆ ದಾನವನ್ನು ಮಾಡುತ್ತ ಶಾಂತ ಮುತ್ತಯ್ಯನು ಸಂತೋಷದಿಂದಿರುತ್ತಾನೆ. ಒಂದು ದಿನ ಅಲ್ಲಿಗೆ ಅಭಸುತನಾದ ರೇವಣಸಿದ್ಧನು ಬಂದು, ಅಮೃತವನ್ನು (ಹಾಲನ್ನು) ದಾನ ನೀಡೆಂದು ಕೇಳುತ್ತಾನೆ. ಆಗ ಶಾಂತಮುತ್ತಯ್ಯನು ಅವನ ಪಾದಕಮಲಕ್ಕೆ ಅಭಿವಂದಿಸುತ್ತಾನೆ. ಹಾಗೆ ಅಭಿವಂದಿಸಿದ ಶಾಂತಯ್ಯನನ್ನು ರೇವಣಸಿದ್ಧನು ಪ್ರೀತಿಯಿಂದ ಎತ್ತಿ "ನೀನಂದ ನುಡಿಗಳು ಸಿದ್ಧಿಸಲಿ" ಎಂದು ಹಾರೈಸುತ್ತಾನೆ. ನಂತರ ರೇವಣಸಿದ್ಧನು ಶಿವನ ಸದ್ಭಕ್ತಿ ಲೀಲೆಗಳನ್ನು ಅವರಿಗೆ ಬೋಧಿಸುತ್ತಾನೆ. ಶಿವನ ಸದ್ಭಕ್ತಿ ಲೀಲೆಗಳನ್ನು ಕೇಳಿದ ಶಾಂತಯ್ಯನಿಗೆ ಲಿಂಗದೀಕ್ಷೆಯನ್ನು ಪಡೆಯಬೇಕೆಂಬ ಆಸೆಯುಂಟಾಗುತ್ತದೆ. ಆಗ ಶಾಂತಮುತ್ತಯ್ಯನು "ತಂದೆ ನನಗೆ ಲಿಂಗದೀಕ್ಷೆಯನ್ನು ನೀಡಿ ಕಾಪಾಡಬೇಕು" ಎಂದು ಭಿನ್ನವಿಸಿಕೊಳ್ಳುತ್ತಾನೆ. ಅವನ ಮಾತಿಗೆ ಒಪ್ಪಿದ ರೇವಣಸಿದ್ಧನು ಆಗಮೋಕ್ತವಾಗಿ ಒಂದು ಸುಮೂರ್ತದಲ್ಲಿ -

> "ಲಿಂಗದೀಕ್ಷೆಯನ್ನಿತ್ತು ಕ್ಷೀರಕುಲವೃಕ್ಷ
> ನಂಗೊಳಿಸಿ ಗುರುಕಂಕಣವಧರಿಸಿ ಕರಕೆಘನ
> ಕಂಗೊಳಿಪತೆರದಿ ಪಟ್ಟವಗಟ್ಟಿ ಗುರುನಾಮಶಾಸನವಗೈದುಮತ್ತೆಂ
> ತುಂಗವರೇವಣಸಿದ್ಧ ಶಾಂತಮುತ್ತಯ್ಯಂಗೆ

ಪಿಂಗದೆ ಕುತೂಹಲದೊಳಾಶಿರ್ವಚಿಸಿ ದಯಾ
ಪಾಂಗದಿಂ ಪಾಲ್ಯವಿದು ಬಳಕಲ್ಲಿಂದ ನಡೆದು ಬಾಂದಳಮಾರ್ಗಕೆ" (ಹಾ. ಪ. ೨-೧೬)

ಎಂಬ ವಿವರಗಳನ್ನು ನೋಡಿದರೆ ಲಿಂಗಾಪೇಕ್ಷಿಯಾದ ಶಾಂತಮುತ್ತಯ್ಯನಿಗೆ ರೇವಣಸಿದ್ಧರು ಲಿಂಗದೀಕ್ಷೆಯನ್ನು ದಯಪಾಲಿಸಿ, ಗುರುಕಂಕಣವನ್ನು ಕರಕೆ ಕಟ್ಟಿ, ಗುರುನಾಮ ಶಾಸನವನ್ನು ರಚಿಸಿ ಕುರುಬ ಕುಲಕ್ಕೆ ಅಧ್ಯಕ್ಷನನ್ನಾಗಿ ಮಾಡಿದ ವಿಷಯವನ್ನು ಹೇಳಲಾಗಿದೆ".[೨] ಇಲ್ಲಿ ಬಂದಿರುವ ವಿವರಗಳನ್ನು ಗಮನಿಸಿದಾಗ ಮೂಲತಃ ಕುರುಬನೂ, ಭಕ್ತನೂ ಆಗಿರುವ ಶಾಂತಮುತ್ತಯ್ಯನವರಿಗೆ ಗುರು ರೇವಣಸಿದ್ಧರು ಸರವೂರಿನಲ್ಲಿ ದರ್ಶನವನ್ನು ನೀಡಿ ದೀಕ್ಷೆಯನ್ನು ಕೊಟ್ಟು ಕುರುಬ ಕುಲಕ್ಕೆ ಒಡೆಯನನ್ನಾಗಿ ಮಾಡಿದ ವಿಚಾರವನ್ನು ಈ ಕೃತಿಯು ಸ್ಪಷ್ಟಪಡಿಸುತ್ತದೆ.

### ೩.೩. ಚೆನ್ನಬಸವ ಕವಿಯ ಹಾಲುಮತ ಪುರಾಣ

ಚೆನ್ನಬಸವ ಕವಿಯ ಹಾಲುಮತ ಪುರಾಣ ೧೫ ಸಂಧಿ, ೧೬೨೯ ಪದ್ಯಗಳನ್ನೊಳಗೊಂಡಿದ್ದು ಇದು ಸಾಂಗತ್ಯರಾಗದ ಸುಲಭ ಶೈಲಿಯಲ್ಲಿ ರಚನೆಯಾಗಿದೆ. ಸಂಧಿ ಎರಡರಲ್ಲಿ ಶಾಂತಮುತ್ತಯ್ಯನ ಬಗ್ಗೆ ಕೆಲವು ವಿವರಗಳಿವೆ.

ರೇವಣಸಿದ್ಧರು ಸರವೂರಿನಲ್ಲಿರುವ ಶಿವಭಕ್ತ ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆಯನ್ನು ಕೊಟ್ಟು ಗುರು ಕಂಕಣವನ್ನು ಕಟ್ಟಿ ಕುರುಬ ಕುಲಕ್ಕೆ ಅಧ್ಯಕ್ಷನನ್ನಾಗಿ ಮಾಡುತ್ತಾರೆ. ಹೀಗೆ ರೇವಣಸಿದ್ಧರಿಂದ ದೀಕ್ಷೆಗೊಂಡು ಕುರುಬ ಕುಲದ ಅಧ್ಯಕ್ಷನಾದ ಶಾಂತಮುತ್ತಯ್ಯನು ಮುಂದೆ ಕಲ್ಯಾಣ ಪಟ್ಟಣದಲ್ಲಿ ನೆರೆದ ಶರಣ ಸಮುದಾಯದ ಮುಂದೆ ಸತ್ತಿರುವ ತಗರವೊಂದನ್ನು ಬದುಕಿಸಿ ಬಸವಾದಿ ಶರಣದಿಂದ ಮತ್ತು ಅರಸ ಬಿಜ್ಜಳನಿಂದ ಮೆಚ್ಚುಗೆಯನ್ನು ಪಡೆಯುತ್ತಾನೆ. ಅದರಂತೆ ಕುರುಬ ಕುಲಕ್ಕೆ ಗುರುತನವು ದೊರಕಿರುವುದರ ಕುರುಹಾಗಿ ಬಸವಣ್ಣನವರಿಂದ 'ಮೂರೇಣಿನ ಕಂಥೆ'ಯನ್ನು ಚೆನ್ನಬಸವ ಕಾಣಿಕೆಯಾಗಿ ಪಡೆಯುತ್ತಾನೆ'.

"ಹಾಲುಮತದ ಕುಲದವರ್ಗೆಲ್ಲ ಶಾಂತಯ್ಯ
ಲೋಲ ನೀನೇ ಗುರುವಾಗಿ
ಭೂಲೋಕದೊಳು ಕೀರ್ತಿವಂತನೆನಿಸಿಕೊಂಡೆ
ಮೇಲಾಗಿ ಕುಲವನುದ್ಧರಿಸಿ" (ಸಂ. ೭, ಪ. ೩೮)

ಎಂದು ಹೇಳುತ್ತ ಬಸವಣ್ಣನು ಶಾಂತಯ್ಯನ ಹಣೆಗೆ ವಿಭೂತಿಯನ್ನು ಹಚ್ಚಿ, "ಹಾಲಕುಲದವರ್ಗೆಲ ನೀನು ಗುರುವಾಗು" ಎಂದು ಸಾರಿದನು. ಈ ಐತಿಹಾಸಿಕ ಸಂಗತಿಯು ಹಾಲುಮತ ಪುರಾಣ ಕೃತಿಯಲ್ಲಿಯೂ ಇದೆ.

ರೇವಣಸಿದ್ಧರು ಕೊಲ್ಲಿಪಾಕಿ ಸೋಮನಾಥ ಲಿಂಗದಲ್ಲಿ ಉದಯಿಸಿದರು ಎಂಬ ಪುರಾಣಕರ್ತರ ಅಭಿಪ್ರಾಯವನ್ನು ಒಪ್ಪದೇ ಅವರು ಕುರುಬ ಮೂಲದಿಂದ ಹುಟ್ಟಿ ಬಂದರು ಎಂಬ ಅಭಿಪ್ರಾಯಗಳೂ ಇವೆ. ಅಂಥವುಗಳಲ್ಲಿ ಒಂದು ಅಭಿಪ್ರಾಯ ಹೀಗಿವೆ:- ಹಾಲುಮತದ ಮುದ್ದುಗೊಂಡ ಮತ್ತು ಮುದ್ದವ್ವ

ಎಂಬ ದಂಪತಿಗಳ ಏಳು ಜನ ಮಕ್ಕಳಲ್ಲಿ ಕೊನೆಯವನೇ 'ಉಂಡಾಡ ಪದ್ಮಗೊಂಡ ಅಥವಾ ಉಂಡಾಡ ಪದ್ಮಣ್ಣ. ಈ ಉಂಡಾಡ ಪದ್ಮಣ್ಣನ ಮೊದಲನೆಯ ಹೆಂಡತಿ ಜಿಂಕಾದೇವಿಗೆ ಐದು ಜನ ಮಕ್ಕಳು ಹುಟ್ಟುತ್ತಾರೆ. ೧. ಜಗ್ಗಲಿ ಮುತ್ತಯ್ಯ, ೨. ಸಹಾಯ ಮುತ್ತಯ್ಯ, ೩. ಸೋಹ ಮುತ್ತಯ್ಯ, ೪. ಶಾಂತಿಮಯಮುತ್ತಯ್ಯ, ೫. ದೇವರಾಜ, ನಾಲ್ಕನೆಯ ಮಗನಾದ ಶಾಂತಿಮಯ ಮುತ್ತಯ್ಯನೇ ರೇವಣ ಸಿದ್ಧೇಶ್ವರನ ತಂದೆ - ತಾಯಿ ಹೆಸರು ಮಹಾದೇವಿ. ಶಾಂತಿಮಯ ಮುತ್ತಯ್ಯ ಶಿವಭಕ್ತ ಗುರುಭಕ್ತರೊಡನೆ ಸಮಾಜದ ಹಿತಕಾರ್ಯಗಳನ್ನು ಮಾಡುತ್ತಾ ಕೆಲವು ಕಾಲ ಕೊಲ್ಲಿಪಾಕಿ ಸೀಮೆಯಲ್ಲಿ ನೆಲೆಸಿದರು".[೩] ಮೇಲಿನ ವಿವರಣೆಯಿಂದ ತಿಳಿದುಬರುವ ಸಂಗತಿಗಳೆಂದರೆ ಕುರುಬ ಜನಾಂಗದ ಶಾಂತಿಮಯ ಮುತ್ತಯ್ಯನೇ ರೇವಣಸಿದ್ಧರ ತಂದೆ. ಆತನೂ ಶಿವಭಕ್ತ ಗುರುಭಕ್ತ ಎಂಬುದು ತಿಳಿದು ಬರುತ್ತದೆ. ರೇವಣಸಿದ್ಧನ ತಂದೆ ಶಾಂತಮುತ್ತಯ್ಯ ಎಂದು ಈ ಕೃತಿ ತಿಳಿಸುತ್ತದೆ.

**೩.೪. ಜನಪದ ಹಾಲುಮತ ಮಹಾಕಾವ್ಯ**

ಈ ಕಾವ್ಯದ ಸ್ವರೂಪವನ್ನು ಗಮನಿಸಿ ಹೇಳುವುದಾದರೆ ಪ್ರಥಮ ಅಧ್ಯಾಯ ಕೈಲಾಸದ ಹಾಡಿಕೆ. ಈ ಕಾವ್ಯದಲ್ಲಿ ವಸ್ತು - ಕಥೆ ತುಂಬಿಕೊಂಡಿದೆ. ಪ್ರಥಮ ಅಧ್ಯಾಯದಲ್ಲಿ ನೀರೇ ನಿರಂಕಾರದಲ್ಲಿ ಒಂದು ಗುರುಳಿ ಕಾಣಿಸಿಕೊಂಡು ಅದರಿಂದ ಅಖಂಡೇಶ್ವರ ತಯಾರಾಗುವುದು.

ರಾಕ್ಷಸರು ಹುಟ್ಟಿದ ನಂತರ ಬ್ರಹ್ಮ, ವಿಷ್ಣು, ರುದ್ರ ಮಹೇಶ್ವರ, ಮಹಾದೇವ ಇವರ ಜೊತೆ ಶಾಂತಮುತ್ತಯ್ಯನ ಜನನವಾಗುತ್ತದೆ. ಈ ಶಾಂತಮುತ್ತಯ್ಯನ ಐದು ಜನ ರಾಕ್ಷಸರನ್ನು ಕುರಿಗಳನ್ನಾಗಿ, ಒಬ್ಬ ರಾಕ್ಷಸನನ್ನು ಟಗರನ್ನಾಗಿ ಪರಿವರ್ತಿಸುತ್ತಾನೆ. ಡೊಳ್ಳಾಸುರ ದೈತ್ಯನನ್ನು ಕೊಂದು ಡೊಳ್ಳು ನಿರ್ಮಿಸುತ್ತಾನೆ. ಕುರಿ ಉಣ್ಣೆಯಿಂದ ಕಂಬಳಿ ನೇಯುತ್ತಾನೆ. ಈತ ಸೃಷ್ಟಿಸಿದ ಕುರಿಗಳನ್ನು ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಮಹಾದೇವ ಕಾಯುತ್ತಾರೆ. ಕೊನೆಗೆ ಪಾರ್ವತಿಯ ಪಾಳಿ, ತನ್ನ ನಂತರ ಕುರಿ ಕಾಯುವವರು ಯಾರು ಇಲ್ಲದೆ ಅದನ್ನು ಸ್ವರ್ಗದ ಬಾಗಿಲು ತೆರೆದು ಭೂಮಿಗೆ ಹೊಡೆದು ತರುತ್ತಾಳೆ. ಬಂಕಾಪುರ ಭೂಮಿಯ ಹುತ್ತಿನಲ್ಲಿ ಅವುಗಳನ್ನು ಹೊಗಿಸುತ್ತಾಳೆ.

ಇಲ್ಲಿಯೇ ಪಾರ್ವತಿ ಭೂಮಿಯ ಮಣ್ಣಿಗೆ ತನ್ನ ಮೊಲೆ ಹಾಲು ಕುಡಿಸಿ, ಎರಡು ಗೊಂಬೆಗಳನ್ನು ನಿರ್ಮಿಸುತ್ತಾಳೆ. ಶಿವ ಅದಕ್ಕೆ ಜೀವ ತುಂಬುತ್ತಾನೆ. ಇವರು ಶಿವಪಾರ್ವತಿಯರಿಂದ ನಿರ್ಮಾಣವಾದ ಮೊದಲ ಮಣ್ಣಿನ - ಮಾನವ ಜೋಡಿಗಳು, ಇವರನ್ನೇ ಮುದ್ದವ್ವ ಮುದ್ದುಗೊಂಡನೆಂದು ಕರೆದು, 'ಹಾಲುಮತ'ದವರೆಂದು ಕರೆಯುತ್ತಾರೆ. 'ಹಾಲುಮತ'ದ ನಿಷ್ಪತ್ತಿಗೆ ಬೇರೆ ರೀತಿಯಿಂದ ವಿವರಣೆ ಕೊಡುವುದನ್ನು ಕಾಣುತ್ತೇವೆ.

"ಹಾಲು ತಾಯಿ ಅಂದಾನೆ ಮತವ ಶಿವರಾಯಿಗಂದಾನೆ
ಮತವನೆಂದರೆ ಮಂತರ ಹಾಲುನೆಂದರೆ ಮಣ್ಣೇನ
ಹಾಲುಮತವನಲ್ಲೇನ ಹೆಸರು ಇಡುವುತಾರೇನ"

ಇಲ್ಲಿ ಜೀವ - ದೇಹದ ಕಲ್ಪನೆ ಕೊಡುವ ಪ್ರಯತ್ನ ಮಾಡಿದಂತಿದೆ. ಮಂತ್ರವು ಜೀವನದ ಕಲ್ಪನೆಯಲ್ಲಿದೆ. ಗಾಳಿ ಮತ್ತು ನಾದಗಳನ್ನು ಅದರ ಜೀವಾಳವಾಗಿ ಪರಿಗಣಿಸಿದ್ದಾರೆ.

ಮುದ್ದವ್ವ ಮುದ್ದುಗೊಂಡ ಇವರ ಮಗನೇ ಮಡ್ಡಪ್ಪ. ಶಾಂತಮುತ್ತಯ್ಯ ತಾನು ನೇಯ್ದ ಕಂಬಳಿಯನ್ನು ಶಿವ-ಪಾರ್ವತಿಯರ ಮದುವೆಯಲ್ಲಿ ಆಯೇರಿ ಮಾಡಿರುತ್ತಾನೆ. ಆ ಕಂಬಳಿಯ ಮುದ್ದವ್ವ ಮುದ್ದುಗೊಂಡರಿಗೆ ದೊರೆತ, ಮಡ್ಡಪ್ಪನಲ್ಲಿ ಇರುತ್ತದೆ. ತಾಯಿ ತಂದೆ ಕುರಿ ಕಾಯುತ್ತಾ ಮಡ್ಡಪ್ಪನನ್ನು ಮರೆತು ಹೋಗುತ್ತಾರೆ. ಅವನನ್ನು ಕಾಡಾನೆಗಳು ಸಲಹುತ್ತವೆ, ಗಾಣಿಗನೊಬ್ಬ ಮಡ್ಡಪ್ಪನಿಂದ ಆಕಳುಗಳ ಹಾಲು ಪಡೆದು ಶ್ರೀಮಂತನಾಗುತ್ತಾನೆ, ಮಗಳನ್ನು ಕೊಟ್ಟು ಗೌಳಿಗನಾಗುತ್ತಾನೆ. ಇಷ್ಟು ಕೈಲಾಸದ ಹಾಡಿಕೆಯ ಕಥೆಯಾಗಿದೆ ಎಂದು ಹೇಳಬಹುದು.

**೩.೫. ಶ್ರೀಗುರು ಶಾಂತವಿಜಯ : ಪೌರಾಣಿಕ ನಾಟಕ**

ಶ್ರೀಗುರು ಶಾಂತವಿಜಯವೆಂಬ ಪೌರಾಣಿಕ ನಾಟಕವು ಕುರುಬರ ಸಂಸ್ಕೃತಿಯನ್ನು ಮೂಲವಾಗಿರಿಸಿಕೊಂಡು ಕಥೆ ಬೆಳೆಯುತ್ತಾ ಹೋಗುತ್ತದೆ. ಇದು ಮೂರು ಅಂಕ ಹಾಗೂ ಇಪ್ಪತ್ನಾಲ್ಕು ದೃಶ್ಯಗಳನ್ನು ಒಳಗೊಂಡಂತೆ ಪವಾಡ ಕಥೆಗಳಿಂದ ಕೂಡಿದ ನಾಟಕವಾಗಿದೆ. ಈ ನಾಟಕಕ್ಕೆ ಮೂಲ ಆಕರ ೧೭ನೇ ಶತಮಾನದಲ್ಲಿ ರಚನೆಗೊಂಡ "ತಗರ ಪವಾಡ" ಎಂಬ ಸಾಂಗತ್ಯ ಕೃತಿ.

**ಕಥಾಸಾರ**

ಅತೀವ ಪ್ರೇಮದಿಂದಾಗಿ ಪಾರ್ವತಿಯ ಸ್ತನದಲ್ಲಿ ಹಾಲು ಉಕ್ಕಿ ಭೂಮಿಗೆ ಬೀಳಲು ಅದನ್ನು ಪಾರ್ವತಿ ಅಪವಿತ್ರವೆಂದು ಭಾವಿಸಿದಳು. ಗಂಡನಾದ ಪರಮೇಶ್ವರನ ಮೊರೆ ಹೋಗಿ ಆ ಭೂಮಿಗೆ ಬಿದ್ದ ಹಾಲನ್ನು ಪವಿತ್ರ ಮಾಡಬೇಕೆಂದು ವಿನಂತಿಸುವಳು. ಆಗ ಪರಮೇಶ್ವರನು ಬಲಮೊಲೆಯ ಹಾಲಿನಿಂದ ಒಂದು ಗಂಡು ಮಗುವನ್ನು ಎಡಮೊಲೆಯ ಹಾಲಿನಿಂದ ಒಂದು ಹೆಣ್ಣು ಮಗುವನ್ನು ನಿರ್ಮಿಸಿದನು. ಈ ಕಾರಣವಾಗಿ ಇವರು ಹಾಲುಮತವೆಂಬ ವಂಶದಿಂದ ಉದ್ಧಾರವಾಗಲಿ ಎಂದು ಹರಸಿ ಗಂಡು ಮಗುವಿಗೆ ಮುದ್ದಗೊಂಡಪ್ಪನೆಂದೂ. ಹೆಣ್ಣು ಮಗುವಿಗೆ ಮುದ್ದಮ್ಮನೆಂದು ನಾಮಕರಣ ಮಾಡುತ್ತಾರೆ. ಭೃಂಗಿ ಒಂದೇ ಕೈಯೆತ್ತಿ ನಮಸ್ಕರಿಸಿದ್ದರಿಂದ ಪಾರ್ವತಿ ಕೋಪಗೊಳ್ಳುತ್ತಾಳೆ. ಪರಮೇಶ್ವರ ಪಾರ್ವತಿಗೆ ಅವರ ಪರಿ ಹೇಳುವುದರಿಂದ ಅಲ್ಲಿರುವ ಪ್ರಮಥರು ನಗುವರು. ಆಗ ಮತ್ತೆ ಪಾರ್ವತಿ ನೀವು ಭೂಲೋಕದಲ್ಲಿ ಕುರಿಗಳಾಗಿ ಹುಟ್ಟಿರೆಂದು ಶಾಪ ಕೊಡುತ್ತಾಳೆ. ಪರಮೇಶ್ವರ ನಾರದನನ್ನು ಕರೆಯಿಸಿ ಈ ವಿಷಯವನ್ನು ಪ್ರಸ್ತಾಪಿಸಿ ಲೋಕ ಸಂಹಾರಕ್ಕೆ ಕಳಿಸುತ್ತಾರೆ. ಅತ್ತ ರೇವಣಸಿದ್ಧ ಕೊಲ್ಲಾಪುರವನ್ನು ಪ್ರವೇಶಿಸುತ್ತಾರೆ. ಅಲ್ಲಿನ ಜನರು ರೇವಣಸಿದ್ಧರಲ್ಲಿ ದೂರು ಹೇಳಿಕೊಳ್ಳುತ್ತಾರೆ. ಇಲ್ಲಿ ಮಾಯವೆಂಬ ವೇಶ್ಯೆ ಸುರಸುಂದರಾಂಗಿ ಆಕೆಯಲ್ಲಿ ಕರುಣೆ, ಸ್ನೇಹ, ಪ್ರೀತಿ ಎಳ್ಳಷ್ಟು ಇಲ್ಲ ಅಂಗ ಸೌಂದರ್ಯಕ್ಕೆ ಆಕರ್ಷಕರಾಗಿ ಬರುವ ಪುರುಷರನ್ನು, ಸನ್ಯಾಸಿಯಾಗಿರಲಿ, ಸಂಸಾರಿಗಳಾಗಿರಲಿ, ದಾಸರನ್ನಾಗಿ ಮಾಡಿಕೊಳ್ಳುವುದು ಆಕೆಯ ಉದ್ದೇಶವಾಗಿತ್ತು. ಇದಕ್ಕೆ ಆಕೆ ಹಾಕಿರುವ ಷರತ್ತೆಂದರೆ ಆಕೆ ಕೊಡುವ ಹದಿನೆಂಟು ಕೊಡ ವಿಷವನ್ನು ಕುಡಿದು

ಯಾರು ಜಯಿಸುವರೋ ಅವರಿಗೆ ತನ್ನ ಸರ್ವಸ್ವವನ್ನು ಅರ್ಪಿಸುವಳಂತೆ. ಇದಕ್ಕೆ ಜನರು ತಮ್ಮ ಆಸೆಗಾಗಿ ತಮಗರಿವಿಲ್ಲದಂತೆ ಬಲಿಯಾಗುತ್ತಿರುತ್ತಾರೆ. ಇದನ್ನು ಗಮನಿಸಿದ 'ರೇವಣಸಿದ್ಧರು' ಆಕೆಯ ಷರತ್ತಿನಂತೆ. "ಹದಿನೆಂಟು ಕೊಡ" ವಿಷ ಕುಡಿದು 'ಆಕೆಗೆ' ಬುದ್ಧಿವಾದ ಹೇಳಿ ನಿನಗೆ ತಕ್ಕ ಶಿಕ್ಷೆಯೆಂದರೆ ನೂರು ಸಾವಿರ ವರ್ಷ (ಶತ ಸಾವಿರ ವರ್ಷ) ಮಾನವರ ಕಣ್ಣಿಗೆ ಗೋಚರಿಸದೆ, ನೆಲೆಯಿಲ್ಲದೆ ಅಲೆದಾಡು ಎಂದು ಶಾಪವಿತ್ತರು. ರೇವಣಸಿದ್ಧರ ಹೇಳಿಕೆಯಂತೆ ಅಲ್ಲಿಯ ಜನರು ಕುರಿಗಳಾಗಿ ಅವತರಿಸುತ್ತಾರೆ.

ನಂತರ ಮುದ್ದುಗೊಂಡಯ್ಯ ಮತ್ತು ಮುದ್ದಮ್ಮನವರಿಗೆ "ಆದಿಗೊಂಡಯ್ಯ"ನೆಂಬ ಮಗ ಜನಿಸುತ್ತಾನೆ. ಆ ಆದಿಗೊಂಡಯ್ಯನಿಗೆ ಆರು ಜನ ಗಂಡು ಮಕ್ಕಳು ಜನಿಸುತ್ತಾರೆ. ನನ್ನ ವರಪ್ರಸಾದದಿಂದ ಜನಿಸಿದ "ಪದ್ಮಣ್ಣ"ನೆಂಬಾತ. ನಿಮಗೆ ಒಡೆಯನಾಗುವನು. ಆನಂತರ ನಿಮ್ಮನ್ನು ಪಾಲಿಸಿದ ಪರಿಣಾಮವಾಗಿ "ಹಾಲುಮತವು" ಕುರುಬ ಕುಲವೆಂದು ಖ್ಯಾತಿಗಳಿಸುವುದು.

ಕೈಲಾಸದಲ್ಲಿ ಪಾರ್ವತಿಗೆ ಅಪಹಾಸ್ಯ ಮಾಡಿ ಕುರಿಗಳಾದವರನ್ನು ದೇವತೆಗಳು ರೇಣುಕರಿಗೆ ಒಪ್ಪಿಸುತ್ತಾರೆ. ನಂತರ ರೇಣುಕರು ಕುರಿಗಳ ಮೂಲಕ 'ಆದಿಗೊಂಡಯ್ಯ'ನ ಹೊಲದ ಹತ್ತಿರ ಬಂದಿಳಿದರು. ಹುತ್ತದಲ್ಲಿ ಕುರಿಗಳನ್ನು ಹಾಕಿ ಮುಚ್ಚಿಟ್ಟು ಅದರ ಗುರುತಿಗಾಗಿ ಒಂದು ಮುತ್ತುಗದ ಮರವನ್ನು ನಿರ್ಮಿಸುವನು. ಅಲ್ಲಿಗೆ 'ವೀರೇಶ' ಬರುತ್ತಾನೆ. ಅದರ ಹೊಣೆಯನ್ನು ಅವನಿಗೆ ಒಪ್ಪಿಸುತ್ತಾರೆ.

ಇತ್ತ 'ಆದಿಗೊಂಡಯ್ಯನ' ಮಕ್ಕಳು ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿದ್ದರೆ, 'ಪದ್ಮಣ್ಣ' ಶಂಕರನ ಪೂಜೆಯಲ್ಲಿ ಮೈಮರೆತಿರುತ್ತಾನೆ ಎಂದು ತಾಯಿ ಮಲ್ಲಮ್ಮ ಹೇಳುತ್ತಾಳೆ. ಉಳಿದ ಮಕ್ಕಳು ಪದ್ಮಣ್ಣನನ್ನು ಕುರಿತು ಕೋಪದಿಂದ ರೇಗಾಡಿದರೆ ಮನೆಯ ಬದುಕೇ ಹಾಳಾಗುತ್ತದೆ ಎಂದು ಆತಂಕಕ್ಕೆ ಒಳಗಾಗುವಳು. ಒಂದು ದಿನ ಇದ್ದಕ್ಕಿದ್ದ ಹಾಗೆ. 'ಪದ್ಮಣ್ಣ' ಅಪ್ಪ ನಾನು ಹೊಲ ಕೆಲಸಕ್ಕೆ ಹೋಗುತ್ತೇನೆ ಎನ್ನುತ್ತಾನೆ. ತಂದೆ, ತಾಯಿ ಸಂತೋಷದಿಂದ ಕಳಿಸುತ್ತಾರೆ. ತಂದೆಯಾದ ಮುದ್ದಣ್ಣ ಹೊಲದಲ್ಲಿ ಏನಾದರೂ ಕೆಲಸ ಮಾಡು. ಆದರೆ, ಆ 'ಮುತ್ತುಗದ ಮರ' ಮತ್ತು 'ಹುತ್ತ'ವನ್ನು ಹಾಳು ಮಾಡಬೇಡ ಎಂದು ಹೇಳುತ್ತಾನೆ. ಎಲ್ಲ ಕೆಲಸ ಮುಗಿಸಿ ನಂತರ ಪದ್ಮಣ್ಣ 'ಹುತ್ತ' ಮತ್ತು 'ಮುತ್ತುಗದ' ಮರ ಯಾಕೆ? ಹಾಳು ಮಾಡಬಾರದು. ಇದರ ಹಿಂದೆ ಏನೋ ಇದೆ ಎಂದು ಅರಿತು ಅಗಿದು, ಕಡಿದು, ಹುತ್ತವನ್ನು ಕೆಡಿಸುವಾಗ ಹುತ್ತದಿಂದ ಕುರಿಗಳ ಹಿಂಡೇ ಹೊರಬರುತ್ತದೆ. ಇದನ್ನು ಗಮನಿಸಿದ ಪದ್ಮಣ್ಣ ಭಯದಿಂದ ನಡುಗುತ್ತ ನಿಂತಿರುವನು. ಅಲ್ಲಿಗೆ ರೇವಣಸಿದ್ಧರು ಅವತರಿಸಿ, "ಹೆದರಬೇಡ ಪದ್ಮಣ್ಣ ಒಂದು ಅಪೂರ್ವವಾದ ಕೆಲಸ ನಿನ್ನಿಂದ ಆಗಬೇಕಾಗಿದೆ. ಅದಕ್ಕೆ ಈಗ ಕಾಲ ಕೂಡಿ ಬಂದಿದೆ" ಎಂದು ಹೇಳುತ್ತಾರೆ. ಈ ಕುರಿಗಳ ಜವಾಬ್ದಾರಿ ನಿನ್ನದು. ಸದಾ ನಿನಗೆ ಶಕ್ತಿಯಾಗಿರಲು ವೀರಭದ್ರನನ್ನು ಕಳಿಸುವೆನು ಎಂದು ವೀರಭದ್ರನನ್ನು ಕರೆಸಿ ಅವನಿಗೆ ವಿಷಯ ತಿಳಿಸುವನು. ವೀರಭದ್ರ ಕುರುಬ ಕುಲ ಸ್ಥಾಪಕನಾದ ಪದ್ಮಣ್ಣನ ಹೊಣೆ ನನ್ನದು ಎನ್ನುತ್ತಾನೆ. ಅಲ್ಲಿಗೆ ರೇವಣಸಿದ್ಧರು ಮರೆಯಾಗುವರು.

ಇತ್ತ ಕುರಿಗಳನ್ನು ಹೊಡೆದುಕೊಂಡು ಕಾಡಿನ ಕಡೆಗೆ "ಪದ್ಮಣ್ಣ', 'ಬೀರಯ್ಯ' ಹೋಗುತ್ತಿರುವಾಗ, ಒಬ್ಬ ಹೆಂಗಸು ರೋಧಿಸುತ್ತ, ನನ್ನನ್ನು ಕಾಪಾಡಿ ಎಂದು ಅರಚುತ್ತ ಬರುವಳು. ರಾಕ್ಷಸ ಅವಳಿಗೆ

ಹತ್ತಿರನಾಗುತ್ತಿದ್ದಂತೆ, ಮತ್ತೇ ಜೋರಾಗಿ ಕಾಪಾಡಿ, ಕಾಪಾಡಿ (ರಕ್ಷಿಸಿ ರಕ್ಷಿಸಿ) ಎಂದು ಬೇಡುವಳು, ಅಲ್ಲಿಗೆ ಬೀರಯ್ಯ ಬರುತ್ತಾನೆ. ಆ ರಾಕ್ಷಸನಿಗೂ ಬೀರಯ್ಯನಿಗೂ ಮಾತಿನ ಚಕಮಕಿಯೊಂದಿಗೆ ಘೋರ ಯುದ್ಧ (ಕಾಳಗ) ನಡೆಯುತ್ತದೆ. ಕೊನೆಗೆ ಬೀರಯ್ಯ ಅವನನ್ನು ನೆಲಕ್ಕೆ ಅಪ್ಪಳಿಸಿ ಕಾಲಿನಿಂದ ತುಳಿದು ಹಾಕುವನು -

ರಕ್ಕಸ ನೆಲಕ್ಕೆ ಬಿದ್ದು "ಅಯ್ಯೋ ನನ್ನ ಮೂಳೆಗಳೆಲ್ಲ ಮುರಿದು ಹೋದವಯ್ಯ, ನಾನು ಈ ನೋವನ್ನು ಸಹಿಲಾರೆ ನಿನ್ನ ಪಾದಸ್ಪರ್ಶದಿಂದ ನನಗಿನ್ನು ವಿಮೋಚನೆಯಾಯಿತು. ನಾನೊಬ್ಬ ಗಂಧರ್ವ ದೇವ, ದೇವಲೋಕದಲ್ಲಿ ಒಬ್ಬ ಗಂಧರ್ವ ಕನ್ಯೆಯನ್ನು ಕಾಮಿಸಿದ ಕಾರಣ ನಾನು ಭೂಲೋಕದಲ್ಲಿ ಜನಿಸುವ ಪ್ರಾಯಶ್ಚಿತ ನನಗೊದಗಿತ್ತು. ನಾನು ಕಾಡು ಅಲೆಯುತ್ತಿರುವಾಗ ಈ ಕುರುಬ ವಂಶದ ರಾಜಕನ್ಯೆ ಸಿರಿವಂತೆಯ ದೆಸೆಯಿಂದ ನನಗೆ ಮುಕ್ತಿ ದೊರೆಯುವುದು. ಆಕೆಯನ್ನು ರಕ್ಷಿಸಲು ಬಂದ ಮಹಾನುಭಾವನ, ಹಸ್ತಸ್ಪರ್ಶದಿಂದ ಶಾಪ ವಿಮುಕ್ತಿ ದೊರೆಯುತ್ತದೆ ಎಂದು ವಾಣಿಯಾಗಿತ್ತು. ಇಂದು ಅದು ನೆರವೇರಿತು ಎನ್ನುತ್ತಾನೆ. ಆಗ ಬೀರೇಶನು ನಿನ್ನ ಮೂಲಗುಣ ಸದುಪಯೋಗವಾಗಲು ಕುರುಬ ಕುಲದಲ್ಲಿ ಕಂಬಳಿ ನೇಯ್ಗೆ ಕೆಲಸದ ಉಪಕರಣಗಳಿಗೆ ಬಳಕೆಯಾಗಲಿ ಎಂದು ನುಡಿಯುತ್ತಾನೆ. ನಂತರ ಸಿರಿವಂತೆಯನ್ನು ಎಲ್ಲಾ ವಿಚಾರಿಸಿ ತಿಳಿದು ಆಕೆಯನ್ನು ಪದ್ಮಣ್ಣನಲ್ಲಿಗೆ ಕರೆದು ತರುವನು. ಪದ್ಮಣ್ಣನಿಗೆ ಆ ಸಿರಿವಂತೆಯನ್ನು ಮದುವೆ ಮಾಡಿಸುವನು. ಅಲ್ಲಿಗೆ ರೇವಣಸಿದ್ಧರು ಬರುವರು. ಅವರಿಗೆ ಆಶೀರ್ವದಿಸುವರು.

ನಂತರ ರೇವಣಸಿದ್ಧರು ಈ ಪದ್ಮಣ್ಣ ಸಿರಿವಂತೆಯನ್ನು ಹಿರಿಹೆಂಡತಿಯಾಗಿ ಸ್ವೀಕರಿಸುವುದರಲ್ಲಿ ಅರ್ಥವಿದೆ. ಹಿರಿಯ ಪತ್ನಿಯಾದ ಲಿಂಗಮ್ಮನ ಮಕ್ಕಳು "ಉಣ್ಣೆಕಂಕಣದ ಕುರುಬರೆಂದು, ಕಿರಿಪತ್ನಿ ಸಿರಿವಂತೆಯ ಮಕ್ಕಳು ಹತ್ತಿ ಕಂಕಣ ಕುರುಬರೆಂದು ಪ್ರಖ್ಯಾತರಾಗಲಿ, ಕುಲರಕ್ಷಣೆಯನ್ನು ಕೈಗೊಂಡಿರುವ ನೀವು ಕುರುಬ ಗೌಡರೆಂದು ಖ್ಯಾತರಾಗಿ ಬಾಳಿ, ವೀರಭದ್ರನಿಗೆ ಬೀರಲಿಂಗೇಶ್ವರನೆಂದು ನಾಮ ಹೊಂದಿ ಕುರುಬ ಕುಲದವರಿಗೆ ದೇವರಾಗು, ಪದ್ಮಣ್ಣ ಸಿರಿವಂತೆ ನೀವು ರೇವಣಸಿದ್ಧೇಶ್ವರನ ಮಕ್ಕಳಾಗಿ ಸುಖದಿಂದಿರಿ ಎಂದು ಸರ್ವರಿಗೂ ಭಸ್ಮವನ್ನಿಡುವರು.

ಆ ನಂತರ ಒಂದು ದಿನ ಮಲ್ಲಮ್ಮನ ಕನಸಿನಲ್ಲಿ ರೇವಣಸಿದ್ಧರು ಬಂದು ವಿಷಯಗಳನ್ನು ತಿಳಿಸಿ ಹೋಗುತ್ತಾರೆ. ಎಚ್ಚೆತ್ತು ಮಲ್ಲಮ್ಮ ಗಂಡನಿಗೆ ವಿಷಯ ತಿಳಿಸುತ್ತಾಳೆ. ಆ ಕನಸಿನಲ್ಲಿ ಪದ್ಮಣ್ಣನನ್ನು ಕಂಡೆನು ಎಂದು ಸಂತೋಷಿಸುತ್ತಾಳೆ. ಒಂದು ದಿನ ಒಬ್ಬ ಸಾಧು ಆದಿಗೊಂಡಯ್ಯನ ಮನೆಗೆ ಬರುತ್ತಾನೆ. ಮಲ್ಲಮ್ಮ ಅವರಿಗೆ ಸತ್ಕರಿಸುತ್ತಾಳೆ. ಆಗ ಸಾಧು ನಿಮ್ಮ ಬಹು ದಿನಗಳ ಕನಸು ನನಸಾಗುತ್ತದೆ.

ಆದರ್ಶ ದಂಪತಿಗಳಾದ, ಪದ್ಮಣ್ಣ, ಸಿರಿವಂತೆಯರ ಮಗನ ಮದುವೆಯನ್ನು ಮುಂದೂಡಬೇಡ. ಎಲ್ಲ ಶುಭವಾಗುತ್ತದೆ ಎನ್ನುವನು. ಹೀಗೆ ಶಾಂತಯ್ಯ ಮತ್ತು ದೇವಮ್ಮರ ಮದುವೆ ನೆರವೇರುತ್ತದೆ. ಆಮೇಲೆ ಸಿರಿವಂತೆ ಪದ್ಮಣ್ಣ "ತೊಗರಿಸಿ" ಗ್ರಾಮದ ಕಡೆಗೆ ಹೋಗುವರು. ಅಲ್ಲಿ ಬಯಲಲ್ಲಿ ಸಿರಿವಂತೆ,

ಪದ್ಮಣ್ಣ ಹಾಡುತ್ತಾ, ಕುರಿಮೇಯಿಸುವುದನ್ನು ನೋಡಿದ ಸಿದ್ಧಣ್ಣನೆಂಬ ವ್ಯಕ್ತಿ ಆದಿಗೊಂಡಯ್ಯನಿಗೆ ಬಂದು ವಿಷಯ ತಿಳಿಸುತ್ತಾನೆ. ಆದಿಗೊಂಡಯ್ಯ ತನ್ನ ಮಗನಿಗೆ ವಿಚಾರಿಸಲು ಬರುತ್ತಾನೆ. ಮಲ್ಲಮ್ಮನಿಗೆ ತಾಳಲಾರದೆ ತಾನು ಸಹ ಹೊಲಕ್ಕೆ ಬರುತ್ತಾಳೆ. ತಾಯಿಯನ್ನು ನೋಡಿದ ಪದ್ಮಣ್ಣ ಓಡೋಡಿ ಬಂದು ಅಪ್ಪುವನು. ಆ ತಾಯಿಗೆ ಮಗನ ಕಂಡು ಮಹದಾನಂದವಾಗುತ್ತದೆ. ಸಿರಿವಂತೆ ಅತ್ತೆ-ಮಾವರಿಗೆ ವಂದಿಸು ವಳು. ತಂದೆ ನಮ್ಮ ಮಗನಾಗಿ ಹುಟ್ಟಿದ್ದಕ್ಕೂ ಸಾರ್ಥಕವಾಯಿತೆಂದು ಹರ್ಷ ವ್ಯಕ್ತಪಡಿಸಿ ಅವರನ್ನು ಮನೆಗೆ ಕರೆ ತರುತ್ತಾರೆ. ಲಿಂಗಮ್ಮ ಶಾಂತಯ್ಯ ಆರತಿ ತಂದು ಬೆಳಗುವರು. ಮೊದಲನೆ ಹೆಂಡತಿಯಾದ ಲಿಂಗಮ್ಮನು ಸಂತೋಷಗೊಳ್ಳುವಳು. ಪದ್ಮಣ್ಣ ಬಂದಿದ್ದಕ್ಕಾಗಿ ಮನೆಯಲ್ಲಿ ಹಬ್ಬದ ರೀತಿಯಲ್ಲಿ ಹೋಳಿಗೆ ಮಾಡಿ ವಿಜೃಂಭಿಸುವರು.

ನಂತರ ಪದ್ಮಣ್ಣ ತಾನು ಹೊರಡುವ ಇಂಗಿತ ವ್ಯಕ್ತಪಡಿಸುತ್ತಾರೆ. ಮನೆಯವರು ಇಲ್ಲೇ ಇರು ಎಂದು ಹೇಳುತ್ತಾರೆ. ಪದ್ಮಣ್ಣ ನನಗೆ ಆ ದೇವರ ಇಚ್ಛೆ ಆಗಿದೆ, ನಾನು ಈ ಕಾಯಕದಲ್ಲಿ ಮುಂದುವರೆಯ ಬೇಕು. ಹಾಗಾಗಿ ನಾನು ಹೋಗಲೇಬೇಕು. ಜೊತೆಗೆ ಶಾಂತಮುತ್ತಯ್ಯ - ದೇವಮ್ಮನನ್ನು ಕರೆದುಕೊಂಡು ಹೋಗುತ್ತೇವೆ ಎನ್ನುವರು. ಅವರೂ ಸಹ ಅವರ ಹಿಂದೆ ಹೊರಡುವರು. ಅಲ್ಲಿಗೆ ರೇವಣಸಿದ್ಧರು ಬಂದು ಎಲ್ಲರಿಗೂ ಆಶೀರ್ವಾದ ಮಾಡುವರು.

ಮುಂದೆ ಹೀಗೆ ಕಾಡು-ಮೇಡು ಸುತ್ತಿಕೊಂಡು ಹೋಗುವರು. ಒಂದು ಚಿಕ್ಕ ಗ್ರಾಮದಲ್ಲಿ ಬಂದು ಗುಡಿಸಲು ಕಟ್ಟಿಕೊಂಡು ಮಗನಿಗೆ ಎಲ್ಲವನ್ನು ಹೇಳಿ ಇವತ್ತಿನಿಂದ ಹೊಸ ಜೀವನ ಪ್ರಾರಂಭವಾಗಿದೆ. ನಮಗೆ ವಯಸ್ಸಾಯ್ತು ಅಂಥ ಹೇಳುತ್ತಾರೆ. ಮಗನಾದ ಶಾಂತಮುತ್ತಯ್ಯ ಹಾಗೆ ಆಗಲಿ ಎನ್ನುತ್ತಾನೆ. ರೇವಣಸಿದ್ಧರು ನಿಮ್ಮನ್ನು ಸದಾ ಕಾಪಾಡಲಿ ಎಂದು ಬೇಡಿಕೊಳ್ಳುತ್ತಾರೆ.

ಹೀಗೆ ಮುದ್ದಗೊಂಡಯ್ಯ ಮತ್ತು ಮಲ್ಲಮ್ಮರು ಸ್ವಲ್ಪ ದುಃಖತಪ್ತದಿಂದಲೋ ಲೋಕಕಲ್ಯಾಣಕ್ಕೆ ನಿಮ್ಮಿಂದ ಒಳಿತಾಗಲಿ ಎಂದು ಅವನನ್ನು ಬಿಳ್ಕೊಟ್ಟರು. ಹಾಗೆ ಪದ್ಮಣ್ಣ - ಸಿರಿವಂತೆ ಲಿಂಗಮ್ಮ ಶಾಂತಯ್ಯ - ದೇವಮ್ಮ ಕುರಿಗಳನ್ನು ಹೊಡೆದುಕೊಂಡು ಕಾಡು-ಮೇಡು ಸುತ್ತುತ್ತ ಬಂದರು. ಹೀಗೆ ಬರುವಾಗ ಕಾಲ ಸರಿದಂತೆ ಪದ್ಮಣ್ಣ ಸಿರಿವಂತೆ ಲಿಂಗಮ್ಮರಿಗೆ ವಯಸ್ಸಾಗುತ್ತ ಬಂತು. ಶಾಂತಯ್ಯ ತನ್ನ ತಂದೆ ತಾಯಿಗಳನ್ನು ಹೇಗಾದರೂ ಮಾಡಿ ಒಂದು ಗುಡಿಸಲು ಕಟ್ಟಿ ಅಲ್ಲಿ ಅವರು ತಂಗಲು ವ್ಯವಸ್ಥೆ ಮಾಡಬೇಕೆಂದುಕೊಂಡು ತಂದೆಯನ್ನು ಹೀಗೆ ಕೇಳುವುದು ಎಂದು ಚಿಂತಿಸುತ್ತಿರುವಾಗ ಒಂದು ದಿನ ಪದ್ಮಣ್ಣ ತನ್ನ ಮಗನಾದ ಶಾಂತಯ್ಯನನ್ನು ಕರೆದು ಮಗ ಇದುವರೆಗೂ ನಮ್ಮೊಡನಿದ್ದು ಸಂತೋಷದಿಂದ ಬಾಳಿದಿರಿ ಮುಂದೆಯೂ ನೀವು ಹೇಗೆ ಬಾಳಿರಿ. ನಮಗೆ ಈಗ ವಯಸ್ಸಾಗುತ್ತಾ ಬಂತು. ನಮ್ಮ ಜವಾಬ್ದಾರಿ ಯನ್ನು ನಿಮಗೆ ಹಾಕುತ್ತಿದ್ದೇವೆ. ಈ ಕುರಿಗಳನ್ನು ಜವಾಬ್ದಾರಿಯಿಂದ ಕಾಪಾಡಿಕೊಂಡು ಹೋಗು, ನಿಮ್ಮ ತಾಯಂದಿರು ಸ್ವಲ್ಪ ದೂರದಲ್ಲಿ ಕಾಣುವ ಗ್ರಾಮದಲ್ಲಿ ನಮ್ಮ ಮತಬಾಂಧವರಿದ್ದಾರೆ. ನಾವು ಅಲ್ಲಿ ಕಾಲಾಮಾಪನೆಯನ್ನು ಇರುವುದರಲ್ಲಿಯೇ ನಡೆಸುತ್ತೇವೆ ಎಂದನು. ಹಾಗೆ ಶಾಂತಯ್ಯ ಎಲ್ಲವೂ ತಮ್ಮ

ಆಜ್ಞೆಯಂತೆ ನಡೆಯುತ್ತವೆ. ತಂದೆ ನೀವು ನಿಶ್ಚಿಂತೆಯಿಂದಿರಿ ಎಂದಾಗ ತಂದೆ ಪದ್ಮಣ್ಣ ನಿಮ್ಮ ಜೊತೆಗೆ ಸದಾ ಆ ರೇಣುಕರ ಅನುಗ್ರಹವಿರಲಿ ಎಂದು ಆಶಿಸಿದನು. ಅಲ್ಲಿಂದ ಶಾಂತಯ್ಯ-ದೇವಮ್ಮ ಕಂಬಳಿ ಕುರಿಕಾಯುವ ಕೋಲು, ಕುರಿಗಳನ್ನು ಹೊಡೆದುಕೊಂಡು ಹೋಗುವರು.

ಇತ್ತ ಕಾಯಕ ನಿಷ್ಠೆಯಲ್ಲಿದ್ದ ಶಾಂತಯ್ಯ ದೇವಮ್ಮರನ್ನು ಪರೀಕ್ಷಿಸಲು ರೇವಣಸಿದ್ಧರು ಮಾರುವೇಷದಲ್ಲಿ ಬರುವರು. ರೇವಣಸಿದ್ಧರು ಭಿಕ್ಷೆ ಕೇಳುವರು. ಆಗ ದೇವಮ್ಮ ಬಳಿಗೆ ದಯಮಾಡಿಸಿ ಸ್ವಾಮಿ ಎಂದು ಉಪಚರಿಸುವಳು. ಕುರಿ ಮೇಯಿಸಲು ಹೋದ ಶಾಂತಮುತ್ತಯ್ಯನು ಬರುವರು. ಅವರ ಭಕ್ತಿ ಭಾವವನ್ನು ಕಂಡು ರೇಣುಕರು ಆಶೀರ್ವದಿಸುವರು. ಪ್ರಸಾದ ಸ್ವೀಕರಿಸಿದ ರೇವಣಸಿದ್ಧರು ಪುಣ್ಯ ದಿಂದ ಹಂಚಿ ಉಣ್ಣುವವರಿಗೆ ಹಸಿವಿಲ್ಲ. ಹಾಗಾಗಿ ನಿಮ್ಮ ಮನೆಗೆ ಭಕ್ತರ ದಂಡೆ ಬರಲಿ ಎಂದು ಹೇಳಿದರು. ಭಕ್ತರನ್ನು ಸತ್ಕರಿಸಿದ ಸತಿಪತಿಗಳು ಶರಣಭಕ್ತಿಯಲ್ಲಿ ಲೀನರಾದರು.

ಒಂದು ದಿನ ಯಾತ್ರೆಗಾಗಿ ದಂಡ ಕಟ್ಟಿಕೊಂಡು ಹೋಗುತ್ತಿರುವಾಗ ಹೊಳೆಯಲ್ಲಿ ಶಾಂತಯ್ಯ ಮೀಯುತ್ತಿರುವಾಗ ಆ ಗಾಡಿಗರು ಬಂದು ಅವನನ್ನು ನಾವು ಜಾತ್ರೆಗೆ ಹೊರಟ್ಟಿದ್ದೇವೆ. ದಾರಿ ಬಿಡು ಮಳೆಯಾಗುತ್ತದೆ ಎಂದು ವಾದ ಮಾಡುವಾಗ ಅವರ ಬಂಡಿಯ ಅಚ್ಚುಗಳೆಲ್ಲ ಮುರಿದು ಗಾಡಿಗಳು ಮುಂದಕ್ಕೆ ಹೋಗದೇ ಅಲ್ಲೇ ನಿಂತಿರಲು ಗಾಡಿಗರು ಗಾಬರಿಯಾಗಿ ಅವನು ಸಾಧು ಎಂದು ತಿಳಿದು ಪರಿಪರಿಯಿಂದ ಬೇಡಿದಾಗ ಅವರ ಬಂಡಿಗಳು ಸರಿಯಾಗುವವು. ಇದು ಒಂದು ಪವಾಡದಂತೆ ಆಗುತ್ತದೆ. ಅಲ್ಲಿ ಶಾಂತಯ್ಯನಿಗೆ ರೇವಣಸಿದ್ಧರು ಪ್ರತ್ಯಕ್ಷವಾಗಿ ಎಲ್ಲವನ್ನು ಹೇಳಿ ಹೋಗುವರು. ಆ ಗಾಡಿಗರು ನಿಮ್ಮ ಸಕಲ ಕೆಲಸ ಕಾರ್ಯಗಳಿಗೆ ನಾವು ಇದ್ದೇವೆ ಗುರುವೆ ಎಂದು ಹೊರಡುವರು.

ನಂತರ ಮತ್ತೆ ರೇವಣಸಿದ್ಧರು ದಾರಿಯಲ್ಲಿ ಶಾಂತಯ್ಯನನ್ನು ಸಂಧಿಸುವರು. ಶಾಂತಯ್ಯ ನಿನಗೆ ಮಂಗಳವಾಗಲಿ ಎಂದು ಹರಸುವರು. ನೀವು ಮಾಡುವ ಕಾಯಕ ಮಠದಲ್ಲಿ ನೆರವೇರಲಿ ಎಂದು, ನಿನಗೆ ದೀಕ್ಷೆ ಮಾಡುತ್ತೇವೆ ಎಂದು ಎಲ್ಲ ಗುರು-ಹಿರಿಯರ ಸಮ್ಮುಖದಲ್ಲಿ ಶಾಂತಯ್ಯ ಮತ್ತು ದೇವಮ್ಮರಿಗೆ ದೀಕ್ಷೆ ಮಾಡುವರು. ಎಲ್ಲರೂ ಹರ್ಷಚಿತ್ತದಿಂದ ಹರಸುವರು. ದೀಕ್ಷೆಗಾಗಿ ಬೇಕಾಗಿದ್ದ ಕೈಲಾಸದ ಕರಿಮಲ್ಲಿಗೆಯು ಬೇಕಾಗಿತ್ತು. ತನ್ನ ಭಕ್ತಿಯಲ್ಲಿ ಏನಾದರೂ ವ್ಯತ್ಯಾಸವಾಗಿದ್ದರೆ, ನಾನು ಇಗೋ ಈ ಕುಡುಗೋಲಿನಿಂದ ನನ್ನ ಶಿರವನ್ನು ಅರ್ಪಿಸುವೆನು ಎಂದು ಮುಂದಾಗುವನು, ಹಾಗೆ ಕರಿಮಲ್ಲಿಗೆ ಆಕಾಶ ದಿಂದ ಸುರಿಯುವವು. ಎಲ್ಲರೂ ಆಶ್ಚರ್ಯದಿಂದ ಉಘೇ ಉಘೇ ಎಂದು ಜೈಕಾರ ಹಾಕುವರು. ಸರ್ವರಿಗೂ ಮಂಗಳವಾಗಲಿ, ಈ ಕರಿಮಲ್ಲಿಗೆ ನಿಮ್ಮ ಕುರುಬ ಕುಲದ ಸೊಪ್ಪಾಗಿ ಪರಿಗಣಿಸಲಿ ಎಂದು ಆಶೀರ್ವಾದ ಮಾಡುವರು.

ಅನಂತರ ಇದುವರೆಗೂ ಮಾಡಿದ ಈ ಕುರಿ ಕಾಯುವ ಕೆಲಸವನ್ನು ಯಾರು ಮಾಡುವರು, ಎಂದು ಶಾಂತಯ್ಯ ರೇವಣಸಿದ್ಧರನ್ನು ಕೇಳಿದಾಗ, ಆಗ ರೇವಣಸಿದ್ಧರು ಶಾಂತಯ್ಯ ಈ ಜವಾಬ್ದಾರಿಯನ್ನು ಇದುವರೆಗೂ ನಿಮ್ಮ ಜೊತೆಯಲ್ಲೇ ಕಾಡಿನಲ್ಲಿ ದನಗಳ ಕಾಯುತ್ತಿದ್ದ ಯದುಕುಲದ ಪಕ್ಷದ ಆಲಯ್ಯನಿಗೆ

ಈ ಕುರಿಗಳ ಜವಾಬ್ದಾರಿ ವಹಿಸು, ಇವುಗಳನ್ನು ಕಾಪಾಡಿ ಪ್ರತಿಪಾದಿಸಿದ್ದಕ್ಕಾಗಿ ಆರು ತಿಂಗಳಗೊಮ್ಮೆ ಕುರಿಗಳ ಉಣ್ಣೆಯಲ್ಲಿಯೇ ಕಂಬಳಿ ಕಾಯಕವನ್ನು ನೋಡಿಕೊಂಡು ಹೋಗುವುದಲ್ಲದೆ ಉಣ್ಣೆ ಕತ್ತರಿಸಿದ ಮೇಲೆ ನಿನ್ನ ಅಮೃತ ಹಸ್ತದಿಂದ ಹಾಲುತುಪ್ಪವನ್ನು ಎರಚಿ ಪೂಜೆಯೊಂದಿಗೆ ಕುರಿಗಳ ಮೇಲೆ ಎರಚಿ ಅವರ ಮನೆಗಳಲ್ಲಿ ನಿಮ್ಮ ಬಳಗದವರು ಉಣ್ಣುವುದರಿಂದ ಕುರಿಗಳ ಏಳಿಗೆ ಹೆಚ್ಚಾಗುವುದು ಎನ್ನುತ್ತಾರೆ. ಆಗ ದನದ ಸಂಗಡ ಇದ್ದ ಆಲಯ್ಯ ಅವರ ಸಂಗಡಿಗರನ್ನು ಸಿರಿಗೊಂಡಯ್ಯ ಕರೆದು ತರುವನು. ಎಲ್ಲರೂ ಬರುವರು. ರೇವಣಸಿದ್ಧರ ಮಾತನ್ನು ಕೇಳಿ ಒಪ್ಪಿ ಆನಂತರ ಗೊಲ್ಲರ ಆಲಯ್ಯ ಗೌಡನೆಂದು, ಪ್ರಖ್ಯಾತಿ ಹೊಂದಿ ಬಾಳೆ ಮಾಡು ಎಂದು ಕಂಬಳಿಯನ್ನು ನೀಡುತ್ತಾರೆ ಮತ್ತು ಹಾಲುತುಪ್ಪವನ್ನು ಕುರಿಗಳ ಮೇಲೆ ಎರಚುವಾಗ ಕತ್ತರಿ ಮತ್ತು ಚಿಂಟಿ ಪಟ್ಟಿಯನ್ನು ಹಿಡಿದು ಅಂಡ ಸಾವಿರ, ಎಂಟು ಸಾವಿರ. ಮೂಲ ಕುರಿಯ ಮೂವತ್ತು ಸಾವಿರ ಎಂದು ಹೇಳಿಕೊಂಡು ಹಾಲುತುಪ್ಪವನ್ನು ಕುರಿಗಳ ಮೇಲೆ ಎರಚಿರಿ ಎಂದು ಹೇಳುತ್ತಾನೆ. ಎಲ್ಲರೂ ಸಂತೋಷದಿಂದ ಸ್ವೀಕರಿಸಿ ಹೋಗುವರು.

ಆ ಮೇಲೆ ಬಿಜ್ಜಳನ ದರ್ಬಾರಿನ ಪ್ರವೇಶವಾಗುತ್ತದೆ. ಇಲ್ಲಿ ಪರಸ್ಪರ ಬಸವಣ್ಣ ಬಿಜ್ಜಳ ಮತ್ತು ಸಂಗಡಿಗರಿಂದ ಮಾತುಕತೆಗಳು ನಡೆಯುತ್ತವೆ. ಅದು ಕಲ್ಯಾಣದ ವಿಷಯವಾಗಿ ಜನರ ವಿಷಯವಾಗಿ ಮಾತುಕತೆಗಳು ಸಾಗುತ್ತವೆ. ಬ್ರಹ್ಮಯ್ಯನ ವಿಚಾರವಾಗಿ ಬಿಜ್ಜಳ ಕರೆಸಿ ಕೇಳಿದಾಗ ಕಾಯಕ ಮೂಲದ ಬಗ್ಗೆ ಬ್ರಹ್ಮಯ್ಯ ಹೇಳುತ್ತಾನೆ. ಬಿಜ್ಜಳ ಸಿಟ್ಟಿಗೇಳುತ್ತಾನೆ. ಅದಕ್ಕೆ ಹೆದರದೆ ಬ್ರಹ್ಮಯ್ಯ ಹೇಳಿ ಹೋಗುತ್ತಾನೆ. ನಂತರ ಬಪ್ಪಯ್ಯ ಮತ್ತು ವೇಶ್ಯೆಯಾದ ಚೆನ್ನಿಯ ಪ್ರಸಂಗ ನಡೆಯುತ್ತದೆ. ಈ ಭಾಗದಲ್ಲಿ, ಶಾಂತಯ್ಯನ ಬಗೆಗಿನ ಖಚಿತ ನಿಲುವು ಈ ನಾಟಕದಲ್ಲಿ ದೊರಕುತ್ತದೆ. ಬಪ್ಪಯ್ಯನನ್ನು ಕಾಯುತ್ತ ಕುಂತ ಚೆನ್ನಿ ಅವನು ಬಂದದ್ದನ್ನು ಕಂಡು ಸಂತೋಷಗೊಂಡು ಸ್ವಾಗತಿಸುತ್ತಾಳೆ. ಎಂಟು ದಿನಗಳಿಂದ ಬಪ್ಪಯ್ಯ ಬಾರದ ಕಾರಣ ಚೆನ್ನಿ ತನ್ನ ಎಲ್ಲ ಅಳಲನ್ನು ತೋಡಿಕೊಳ್ಳುತ್ತಾಳೆ, ಆಗ ಬಪ್ಪಯ್ಯ - ಚೆನ್ನಿ ಆಡಿ ನಲಿಯುತ್ತಾರೆ. ಆನಂತರ ಹಿರಿಯರ ಹಬ್ಬವನ್ನು ಮಾಡಬೇಕು. ಹಾಗಾಗಿ ನನಗೊಂದು ಕೊಬ್ಬಿದ ಟಗರ ತರಬೇಕೆಂದು ಬಪ್ಪಯ್ಯನಿಗೆ ಹೇಳುತ್ತಾಳೆ. ಇಷ್ಟೆ ತಾನೆ ಎಂದು ಹೇಳಿ ಟಗರು ತರಲು ಬಪ್ಪಯ್ಯ ಹೋಗುತ್ತಾನೆ. ಇತ್ತ ಚೆನ್ನಿ ಅವರು ಒಳ್ಳೆ ಟಗರನ್ನು ತರುತ್ತಾನೆ ಎನ್ನುವ ನಂಬಿಕೆಯಲ್ಲಿ ಕಾಯುತ್ತಿರುತ್ತಾಳೆ.

ಇತ್ತ ಬ್ರಹ್ಮಯ್ಯ ತ್ರಿಪುರಾಂತಕನ ದೇವಸ್ಥಾನದಲ್ಲಿ ಕಾರ್ಯನಿರತನಾಗಿರುತ್ತಾನೆ. ಆಗ ಲಿಂಗದಿಂದ ಅಶರೀರವಾಣಿ ಕೇಳಿ ಬರುವುದು ಬ್ರಹ್ಮಯ್ಯ ನಿನ್ನ ಮನಸ್ಸಿನ ಕಳವಳ ನನಗೆ ತಿಳಿದಿದೆ. ಇಂದಿನಿಂದ ದೇವಾಲಯದ ಅಂಗಮುಖದಲ್ಲಿ ಪ್ರತಿದಿನವೂ ಹೊನ್ನುಗಳು ಲಭಿಸುವವು, ಅವುಗಳಿಂದ ಶಿವಪೂಜೆ ಶರಣರ ದಾಸೋಹಗಳಿಗೆ ವ್ಯಯಮಾಡಿ ಯಾರ ಹಂಗಿಲ್ಲದೆ ಜೀವಿಸು ಎಂದು ನುಡಿಯುತ್ತದೆ. ಬ್ರಹ್ಮಯ್ಯ ಕೃತಾರ್ಥನಾದೆ ಎಂದು ಪೂಜೆಗಾಗಿ ಪತ್ರ-ಪುಷ್ಪಗಳನ್ನು ತರಲು ಹೋಗುವನು. ಆ ಕಡೆಯಿಂದ ಟಗರನ್ನು ಹೊತ್ತು ತಂದ ಬಪ್ಪಯ್ಯ ಈ ಟಗರು ಎಷ್ಟೊಂದು ಭಾರವಾಗಿದೆ ಎಂದು ಸ್ವಲ್ಪ ಆಯಾಸ ನಿವಾರಿಸಿಕೊಳ್ಳಲು ಟಗರನ್ನು ಆ ತ್ರಿಪುರಾಂತಕ ದೇವಸ್ಥಾನದಲ್ಲಿ ಇರಿಸಿ ಚೆನ್ನಿ ಕಾಯುತ್ತಿರುತ್ತಾಳೆ. ಕಾಯಲಿ ಸ್ವಲ್ಪ ಹೊತ್ತು ಸುಧಾರಿಸಿಕೊಂಡು ಹೋದರಾಯಿತೆಂದು ಅಲ್ಲಿ ವಿಶ್ರಮಿಸುತ್ತಾನೆ. ಬ್ರಹ್ಮಯ್ಯ ಪ್ರವೇಶಿಸಿ ನೋಡುತ್ತಾನೆ.

ಆಶ್ಚರ್ಯ! ಎಂಥ ಸೋಜಿಗ ಈ ಮೂಕ ಪ್ರಾಣಿ ಪರಶಿವನ ಧ್ಯಾನದಲ್ಲಿರುವುದೆಂದರೇನು? ಮಹಾಜ್ಞಾನಿಗಳೆಂದು ಮೆರೆಯುವ ಮಾನವರು ನಾಚಿಸುವಂತಿದೆ ಎಂದು, ಇದೊಂದು ಆದರ್ಶವಾದ ಪ್ರಾಣಿ ಅದ್ಭುತವಾದ ಪವಾಡವೇ ಸರಿ ಎನ್ನುತ್ತಾನೆ. ಎಚ್ಚೆತ್ತ ಬಪ್ಪಯ್ಯ ಎಲ್ಲಿ ಟಗರು ಎಂದು ಹುಡುಕಲು ಅದು ಆ ದೇವರ ಹತ್ತಿರ ಮಲಗಿರುವುದು ನಾನು ನಿನ್ನ ಬಿಡಲಾರೆ ಚೆನ್ನಿಗೋಸ್ಕರ ತಂದ ಟಗರು ನಾನು ಇದನ್ನು ಚೆನ್ನಿಗೆ ಒಪ್ಪಿಸಿ ಪ್ರೀತಿಗೆ ಪಾತ್ರನಾಗುತ್ತೇನೆ ಎನ್ನುತ್ತಾನೆ. ಟಗರನ್ನು ಹಿಡಿದು ಎಳೆಯುತ್ತಾನೆ. ಅದು ಲಿಂಗ ಅಪ್ಪಿ ಮಲಗಿರುವುದು, ಬ್ರಹ್ಮಯ ಪರಿಪರಿಯಿಂದ ಹೇಳುತ್ತಾನೆ. ಕೊನೆಗೆ ಬಪ್ಪಯ್ಯ ನಾನು ಹೊನ್ನ ತಂದಿದ್ದೇನೆ ಎನ್ನುತ್ತಾನೆ. ಆಗ ಬ್ರಹ್ಮಯ್ಯ ಎರಡರಷ್ಟು ಹೊನ್ನನು ಕೊಡುತ್ತೇನೆ. ಇದನ್ನು ನನಗೆ ಕೊಡು ಆನಂತರ ಈ ಟಗರನು ಕೇಳುವ ಹಾಗಿಲ್ಲ ಎನ್ನುತ್ತಾನೆ. ಆಗಲಿ ಎರಡರಷ್ಟು ಹೊನ್ನು ಸಿಕ್ಕ ಮೇಲೆ ಮತ್ತೊಂದು ಟಗರು ತಂದರಾತು ಎಂದು ಬಪ್ಪಯ್ಯ ಆ ಹೊನ್ನು ಇಸಗೊಂಡು ಬರಿಕೈಲಿ ಚೆನ್ನಿ ಮನೆಗೆ ಹೋಗುತ್ತಾನೆ. ನಡೆದ ಸಂಗತಿಯನ್ನು ವಿವರಿಸುತ್ತಾನೆ. ಚೆನ್ನಿ ಹಠ ಮಾಡಿ ಅದೇ ಟಗರು ನನಗೆ ಬೇಕು ಎಂದು ಹೇಳುತ್ತಾಳೆ. ಮತ್ತೆ ಬಪ್ಪಯ್ಯ ಬ್ರಹ್ಮಯ್ಯನಿಗೆ ಹೊನ್ನು ಕೊಟ್ಟು ನನ್ನ ಟಗರು ಕೊಡು ಎಂದು ಕೇಳುತ್ತಾನೆ. ಅದಕ್ಕೆ ಆಗಲೇ ಮುದ್ರೆಯಾಗಿದೆ. ಅದು ದೇವರ ಕುರಿ ಅದು ನಿನಗೆ ಸಿಗದು ಎನ್ನುತ್ತಾನೆ. ಆದರೂ ಚೆನ್ನಿ ತನ್ನ ಅಣ್ಣ - ತಮ್ಮಂದಿರ ಜೊತೆಗೆ ಬಪ್ಪಯ್ಯನನ್ನು ಕಳಿಸುತ್ತಾಳೆ. ಒಂದು ಟಗರನ್ನು ಕೇಳುತ್ತಾರೆ. ಬ್ರಹ್ಮಯ್ಯ ಕೊಡಲು ನಿರಾಕರಿಸುತ್ತಾನೆ. ಆಗ ಚೆನ್ನಿಯ ಅಣ್ಣ ತಮ್ಮಂದಿರು ಬ್ರಹ್ಮಯ್ಯನನ್ನು ಹೊಡೆದು ಹೋಗುವರು. ಬ್ರಹ್ಮಯ್ಯ ಅದರ ಮೇಲೆ ಕೈಯೆತ್ತಲು ಹೋಗಿ ಅವರು ಮರಣ ಹೊಂದುವರು. ಅಳುತ್ತ ಬಪ್ಪಯ್ಯ ಚೆನ್ನಿಯ ಮನೆಗೆ ಬರುತ್ತಾನೆ. ವಿಷಯ ತಿಳಿದ ಮೇಲೆ ಚೆನ್ನಿ ಬಿಜ್ಜಳ ದರ್ಬಾರಿಗೆ ಬರುತ್ತಾಳೆ. ನಡೆದ ಸಂಗತಿ ವಿವರಿಸುತ್ತಾಳೆ. ಆಗ ಬಿಜ್ಜಳ ಮಂಚಣ್ಣ-ಬಸಣ್ಣ ಈಕೆಯ ಮಾತನ್ನು ಕೇಳಿದರಾ ಎನ್ನುತ್ತಾನೆ. ಮಂಚಣ್ಣ ಬ್ರಹ್ಮಯ್ಯ ಉದ್ಧಟತನ ಜಾಸ್ತಿಯಾಗಿದೆ. ಅವನನ್ನು ಕರೆಸಿ ಕೇಳಿ ಎನ್ನುತ್ತಾನೆ. ಅವನು ಹಾಗೆ ನಮ್ಮಲ್ಲಿಗೆ ಬರುವುದಿಲ್ಲ. ಸೈನಿಕರನ್ನು ಕರೆದುಕೊಂಡು ಹೋಗಿ ಅವನನ್ನು ಕರೆದು ತನ್ನಿ ಎನ್ನುತ್ತಾನೆ. ಸೈನಿಕರು ಹೋಗುವರು ಅಲ್ಲಿ ಮಾತಿನ ಚಕಮಕಿ ನಡೆಯುತ್ತದೆ. ಸೈನಿಕರು ಮರಣ ಹೊಂದುವರು. ಆಗ ಬಿಜ್ಜನಳ ಜೊತೆ ಪರಿವಾರದವರು ಆ ತ್ರಿಪುರಾಂತಕನ ದೇವಸ್ಥಾನದ ಹತ್ತಿರ ಬರುತ್ತಾನೆ. ಬಿಜ್ಜಳನನ್ನು ಬರಮಾಡಿಕೊಂಡು ಆಗ ಬಿಜ್ಜಳ ವಿವರಗಳನ್ನು ತಿಳಿಯುತ್ತಾನೆ. ಅದಕ್ಕೆ ಬಸವಣ್ಣ ನಮ್ಮ ಶರಣರ ಪವಾಡಗಳನ್ನು ಕಂಡ ತಮಗೆ ಎಲ್ಲ ಅರ್ಥವಾಗಿರಬೇಕು ಎಂದು ಹೇಳುತ್ತಾನೆ ಮತ್ತು ಸತ್ಯಾಸತ್ಯತೆಯನ್ನು ತಿಳಿದ ಬಿಜ್ಜಳನನ್ನು ಸಂಗಡಿಗರನ್ನು ಬದುಕಿಸಿ ಎಂದು ಕೇಳಿಕೊಳ್ಳುತ್ತಾನೆ. ಬ್ರಹ್ಮಯ್ಯ ಅವರ ಮೇಲೆ ತೀರ್ಥ ಚಿಮುಕಿಸಿದಾಗ ಅವರು ಬದುಕುವರು, ಆಗ ಬಿಜ್ಜಳ ನಿಮ್ಮ ಶರಣರ ಮಹಿಮೆ ಅದ್ಭುತವಾದುದು. ಬಸವಣ್ಣ ಅದಕ್ಕೆ ಸದಾ ಲೋಕದ ಗೌರವಿದ್ದ ಇಂತವರ ಜೊತೆ ನಾವು ಬದುಕಿರುವುದು, ಧನ್ಯಶಾಲಿಗಳೆಂದು ಆಡುವನು. ಅಲ್ಲಿಂದ ಎಲ್ಲರೂ ಈ ಬ್ರಹ್ಮಯ್ಯನಿಗೆ ಜೈಕಾರ ಹಾಕುತ್ತ ಹೋಗುವರು.

ಇತ್ತ ಟಗರಿನ ಪವಾಡ ನಾನಾ ಭಾಗಗಳಿಗೆ ಹಬ್ಬುತ್ತದೆ. ಟಗರು ಎಲ್ಲರ ಮನೆಗಳಿಗೆ ನುಗ್ಗಿ ಕಾಳುಕಡಿ ತಿಂದು ಹಾಳು ಮಾಡುತ್ತದೆ ಎಂದು ಈರಣ್ಣ ಬಂದು ಹೇಳುತ್ತಾನೆ. ಬ್ರಹ್ಮಯ್ಯ ವಿಚಾರಿಸಲು

ಆ ಟಗರು ಲಿಂಗೆ ಮುದ್ರೆಯತ್ತ ಬಂದು ಅದನ್ನು ಕೆದರಿ ಬ್ರಹ್ಮಯ್ಯನನ್ನು ದುರುಗುಟ್ಟಿ ನೋಡುತ್ತದೆ ಈರಣ್ಣ ಹೇಳುತ್ತಾನೆ. ಇಲ್ಲೆ ಹತ್ತಿರದಲ್ಲಿ ಶಾಂತಯ್ಯನೆಂಬ ಶರಣನಿದ್ದಾನೆ. ಆತನ ಬಳಿ ದೊಡ್ಡ ಕುರಿ ಮರಿ ಇದೆ. ಅಲ್ಲಿಗೆ ಬಿಟ್ಟರೆ ಹೇಗೆ ಎಂದು ತೀರ್ಮಾನಿಸಿ, ಅದೇ ಕೆಲಸವನ್ನು ಮಾಡುತ್ತಾರೆ. ಶಾಂತಯ್ಯನ ಉತ್ಸವ ಹೊರಡಿಸುತ್ತಾನೆ. ಆ ಮೀಸಲು ಟಗರನ್ನು ಉತ್ಸವದಲ್ಲಿ ಮೆರೆಸುತ್ತ ಬರುತ್ತಾನೆ. ಶಾಂತಯ್ಯ ತನ್ನ ಮಡದಿಯನ್ನು ಕರೆದು ತೋರಿಸುತ್ತಾನೆ. ಕೊನೆಗೆ ಬ್ರಹ್ಮಯ್ಯ ಆ ಟಗರಿನ ವಿಚಾರ ಹೇಳುತ್ತಾನೆ. ಶಾಂತಯ್ಯ ಆ ಟಗರನ್ನು ನಮ್ಮ ಆಲಯ್ಯನ ಮುದ್ರೆಯಲ್ಲಿ ಬಿಡಿ ಎಂದು ಹೇಳುತ್ತಾನೆ. ಜೊತೆಗೆ ಈ ಟಗರು ಮರಣ ಹೊಂದಿದಲ್ಲಿ ಇದನ್ನು ಕಲ್ಯಾಣಕ್ಕೆ ತಂದೊಪ್ಪಿಸಿ ಇದರ ಹಿನ್ನೆಲೆ ದೊಡ್ಡದು ಎನ್ನುತ್ತಾನೆ. ಶಾಂತಯ್ಯ ಆಗಲಿ ಎಂದು ಹೇಳಿ ಕಳಿಸುತ್ತಾನೆ. ನಂತರ ವ್ಯಾಪಾರದ ಸನ್ನಿವೇಶದಲ್ಲಿ ಗೌಡರು, ಕುರುಬರು, ಶೆಟ್ಟರು, ಎಲ್ಲಾ ವ್ಯಾಪಾರ ಮಾಡುವಾಗ ಕುರುಬ ಕುಲದವರು ಹಾಲು ಮಾರುವ ಕಾಯಕವನ್ನು ಗಮನಿಸಿದ ಇತರರು ಹೊಟ್ಟೆ ಕಿಚ್ಚು ಪಡುವರು. ಜೊತೆಗೆ ಈ ಕುರುಬರು ಮಾಗಿದ ಮೊಲೆ ಹಾಲು ಇಟ್ಟುಕೊಂಡು ಮಾರುವುದು ಅಸಯ್ಯ ಏನು ಮಾಡಬೇಕು. ಯಾರು ಹಾಲು ತೆಗೆದುಕೊಂಡು ಹೋಗಬಾರದು. ಇಂಥ ನೀಚ ಜನರ ಕುರಿತು ಮಹಾರಾಜರಲ್ಲಿ ದೂರು ತಲುಪಿಸಲಾಗುತ್ತದೆ.

ಬಿಜ್ಜಳ ರಾಜ ಎಲ್ಲರನ್ನು ಕರೆಯಿಸಿ ಎಲ್ಲರ ಜೊತೆ ಮಾತಾಡಿ ಕಕ್ಕಯ್ಯನನ್ನು ಕರೆದು ಕಕ್ಕಯ್ಯ ಈ ಕೊಡಲೇ ಕಲ್ಯಾಣದ ಬೀದಿಗಳಲ್ಲಿ ಹಾಲು ಮಾರುವ ಕುರುಬರು ಅಶುಚಿಗಳು ಇವರೊಡನೆ ಕೂಡಿ ಬಾಳುವುದು ಅಪರಾಧ. ಇಂದಿನಿಂದ ಕಲ್ಯಾಣದಿಂದ ಏಳು ಮೈಲು ದೂರದಲ್ಲಿ ಇರಬೇಕು. ಇದು ರಾಜಾಜ್ಞೆ. ಇದನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ಎಂದು ಇದನ್ನು ಸಾರಿಕೊಂಡು ಬಾ ಎಂದು ಕಕ್ಕಯ್ಯನನ್ನು ಕಳಿಸುತ್ತಾನೆ. ಇದನ್ನು ಕೇಳಿಸಿಕೊಂಡ ಕುರುಬ ಕುಲದವರೆಲ್ಲ ಶಾಂತಯ್ಯನ ಬಳಿ ಬಂದು ತಮ್ಮ ದುಃಖ ತೋಡಿಕೊಳ್ಳುತ್ತಾರೆ. ಶಾಂತಯ್ಯ ಎಲ್ಲರನ್ನು ಕರೆಯಿಸಿ ನಡೆಯಿರಿ. ಎಲ್ಲರೂ ಕಲ್ಯಾಣಕ್ಕೆ ಹೋಗೋಣ ಎಂದು ಬಿಜ್ಜಳನ ಹತ್ತಿರ ಬರುತ್ತಾರೆ. ಅಲ್ಲಿ ಲಿಂಗ ಪೂಜೆ ಮಾಡಿ ಆಕಾಶದಿಂದ ತೀರ್ಥವನ್ನು ಸುರಿಸುತ್ತಾನೆ. ಇದನ್ನು ಕಣ್ಣಾರೆ ಕಂಡ ಬಿಜ್ಜಳ ನಾನು ನಿಮ್ಮಗಳ ಪವಾಡಕ್ಕೆ ಮೆಚ್ಚಿದ್ದೇನೆ. ನೀವು ಕಾರಣ ಪುರುಷರು, ಅಸಾಮಾನ್ಯರು, ನಿಮ್ಮ ಕುರುಬ ಕುಲ ಶ್ರೇಷ್ಠವಾದುದೆಂದು ಕಕ್ಕಯ್ಯ ನೀನು ಈಗಲೇ ಡಂಗುರ ಸಾರಿ ಲೋಕಕ್ಕೆಲ್ಲ ಹೇಳಿ ಬಾ ಎನ್ನುತ್ತಾನೆ. ಆಗ ಎಲ್ಲರೂ ಶಾಂತಯ್ಯನನ್ನು ಕುರಿತು ಶಾಂತಯ್ಯ ಒಡೆಯರಿಗೆ ಜೈಕಾರ ಹಾಕುತ್ತಾರೆ. ಬಸವಣ್ಣ ಕುರುಹಾಕಿ ಮೂರು ಗೇಣಿನ ಕುರಿ ಕಂತೆಯನ್ನು ನಿಮ್ಮ ಕುಲದಿಂದಲೇ ಮಾಡಿಕೊಡುವುದು. ಬೇರೆಯವರು ಈ ಕಂತೆಯನ್ನು ಮಾಡಿದರೆ ಅವರಿಗೆ ತಕ್ಕ ಶಿಕ್ಷೆಯನ್ನು ನೀವೇ ವಿಧಿಸಬಹುದು. ರಾಜಬೀದಿ ಎಲ್ಲ ಬೀದಿಗಳಲ್ಲಿ ನಿಮ್ಮ ಉತ್ಸವಕ್ಕೆ ತಡೆಯಿಲ್ಲ. ಆಗ ಎಲ್ಲರೂ ಧನ್ಯರಾದೆವು ಎಂದು ಹೇಳಿ, ರೇವಣ್ಣಸಿದ್ಧೇಶ್ವರ ಉಘೇ, ಉಘೇ ಎಂದು ಹೇಳಿ ಲಿಂಗ ಪೂಜೆ ಮಾಡುವರು.

ಹೀಗೆ ಈ ನಾಟಕದಿಂದ ಶಾಂತಯ್ಯ ಲಿಂಗಪೂಜೆಯ ಮಹಾಮಹಿಮೆಯನ್ನು ವಿವಿಧ ಪವಾಡಗಳ ಮೂಲಕ ಕುರುಬರ ಸಮಾಜವನ್ನು ಪ್ರತಿಬಿಂಬಿಸುತ್ತದೆ. ಅದಕ್ಕೆ ಬೇಕಾದ ಅನೇಕ ಪವಾಡಗಳನ್ನು ಈ

ನಾಟಕದಲ್ಲಿ ತರಲಾಗಿದೆ. ಅದರಲ್ಲಿ "ಟಗರಿನ ಪವಾಡ" ಬಹಳ ಮುಖ್ಯವಾದುದು. ಇದರ ಬೆಂಗಾವಲಾಗಿ ರೇವಣಸಿದ್ಧರು ಕುಲಗುರುವಾಗಿ ನಿಂತುಕೊಳ್ಳುತ್ತಾರೆ. ಒಟ್ಟಾರೆ ಈ ನಾಟಕದ ಕಥೆ ಉಪಕಥೆಗಳ ಮೂಲಕ ಶಾಂತಮುತ್ತಯ್ಯನ ಚರಿತ್ರೆಯನ್ನು ಹೇಳುವುದರ ಜೊತೆಗೆ ಕುರುಬರ ಇತಿಹಾಸ ಮತ್ತು ಸಂಸ್ಕೃತಿಯನ್ನು ವಿವರಿಸಲಾಗಿದೆ.

### ೩.೬. ಶಾಸನಗಳು

### ೩.೬.೧. ಶಿರವಾಳ ಶಾಸನ

ಗುಲ್ಬರ್ಗಾ ಜಿಲ್ಲೆಯ ಶಹಪೂರು ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ೧೦-೧೫ ಕಿ.ಮೀ. ದೂರದಲ್ಲಿ ಭೀಮಾ ನದಿಯ ಬಲದಂಡೆಯ ಮೇಲೆ ಸುಮಾರು ೨ ಕಿ.ಮೀ ಹೋದಂತೆ ಸಿಗುವ ಚಾರಿತ್ರಿಕ ಮಹತ್ವದ ಸ್ಥಳವೇ ಶಿರವಾಳ.

ಈ ಗ್ರಾಮಕ್ಕೆ ಶೈವ ಪುರಾಣೋಕ್ತ ಸಿರಿಯಾಳ ಶೆಟ್ಟಿಯ ಹುಟ್ಟೂರು ಎಂಬಂತಹ ಐತಿಹ್ಯವಿದೆ. ಪ್ರಾಚೀನ ಶಾಸನಗಳಲ್ಲಿ ಶ್ರೀಮೊಳಲು; ಸಿರಿಮೊಳಲು; ದಕ್ಷಿಣ ವಾರಣಾಸಿ. ಧರ್ಮದ ಮನೆ, ಆದಿಪಟ್ಟಣ, ಎಂದೆಲ್ಲಾ ಹೊಗಳಿಸಿಕೊಂಡಿರುವ ಇದು ಹಿಂದೆ ಸಗರನಾಡಿಗೆ ಸೇರಿತ್ತು. ಈ ಗ್ರಾಮವು ಶಾತವಾಹನರಷ್ಟು ಪ್ರಾಚೀನವಾದ ನೆಲೆಯಾಗಿದ್ದು. ಇಲ್ಲಿಂದ ಈವರೆಗೆ ಐದು ಶಾಸನಗಳು ವರದಿಯಾಗಿವೆ. ಇಲ್ಲಿ ೧೫ ವಿಭಿನ್ನ ಶೈವದೇವಾಲಯಗಳನ್ನು ಕಾಣಬಹುದು. ಕೆಲವು ದೇವಾಲಯಗಳು ರಾಷ್ಟ್ರಕೂಟರ ಕಾಲದಷ್ಟು ಪ್ರಾಚೀನವೆಂದು ವಿದ್ವಾಂಸರು ಗುರುತಿಸಿದ್ದಾರೆ.

ಈ ದೇವಾಲಯಗಳಲ್ಲಿ ಒಂದಾದ ಸಿದ್ದೇಶ್ವರ ಅಥವಾ ಸಿದ್ಧಲಿಂಗೇಶ್ವರ ದೇವಸ್ಥಾನ ಅಪೂರ್ವವಾದದ್ದು. ಮಹಾದ್ವಾರ ಸುತ್ತಲೂ ಪೌಳಿ ಮಧ್ಯದಲ್ಲಿ ೪ ರಂಗಮಂಟಪಗಳನ್ನೊಳಗೊಂಡ ಪಂಚಲಿಂಗಗಳ ದೇವಸ್ಥಾನವಿದ್ದು, ಈ ಪಂಚಲಿಂಗಗಳಲ್ಲಿ ಪೂರ್ವದಿಕ್ಕಿನದು. ಬಾಳೆಹಳ್ಳಿ ಪೀಠ, ಉತ್ತರಕ್ಕೆ ಕೇದಾರಪೀಠ, ಪಶ್ಚಿಮಕ್ಕೆ ಉಜ್ಜನಿಪೀಠ, ದಕ್ಷಿಣದ್ದು ಶ್ರೀಶೈಲಪೀಠ, ಮಧ್ಯದಲ್ಲಿರುವುದು ಕಾಶೀಪೀಠವೆಂದು ಅಲ್ಲಿಯ ಜನ ಹೇಳುತ್ತಾರೆ. ಈ ದೇವಾಲಯವು ಪಂಚಕೂಟವಾಗಿದ್ದು ನಾಲ್ಕು ದಿಕ್ಕಲ್ಲೂ ಪ್ರತ್ಯೇಕ ಗರ್ಭಗುಡಿಯ, ಅಂತರಾಳ ಹಾಗೂ ನವರಂಗಗಳಿದ್ದು ಇವುಗಳನ್ನು ಒಗ್ಗೂಡಿಸುವ ನಡುವಣ ಸ್ಥಳದಲ್ಲಿರುವ ಗರ್ಭಗೃಹಕ್ಕೆ ನಾಲ್ಕು ದಿಕ್ಕಿನಿಂದಲೂ ಪ್ರವೇಶವಿದೆ. ಪೂರ್ವ - ಪಶ್ಚಿಮದ ದೇಗುಲಗಳ ನವರಂಗಗಳಿಗೆ ದ್ವಾರಮಂಟಪಗಳಿದ್ದರೆ, ಉತ್ತರ ದಕ್ಷಿಣದ ದೇಗುಲಗಳು ನವರಂಗಗಳನ್ನಷ್ಟೇ ಹೊಂದಿದ್ದು ಕಕ್ಷಾಸನಗಳಿವೆ. ಈ ಪಂಚದೇಗುಲದ ಎಲ್ಲಾ ಗರ್ಭಗೃಹಗಳಲ್ಲಿ ಶಿವಲಿಂಗಗಳಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯನ್ನುಳ್ಳ ತ್ರಿಶಾಖಾಲಂಕೃತ ಬಾಗಿಲವಾಡಗಳನ್ನು ಹೊಂದಿದ್ದರೆ, ನವರಂಗದ ಪ್ರಧಾನ ದ್ವಾರಗಳು ಸುಂದರವಾದ ಪಂಚಶಾಖಾಲಂಕೃತ ಬಾಗಿಲವಾಡಗಳನ್ನು ಹೊಂದಿದೆ.

ಶಿರವಾಳ ಶಾಸನದಲ್ಲಿ ಬರುವ ಶಿವಯೋಗಿ ಶಾಂತಿಮಯ್ಯ ಹಾಗೂ ಅವನ ಮಗ ರೇವಣದೇವಯ್ಯಗಳು ಹಾಗೂ ಅವರ ಪವಾಡಗಳು ಗಮನಾರ್ಹವಾಗಿದ್ದು, ಅವರಿಗೂ ಈ ಗುಡಿಗೂ ಇದ್ದ ಸಂಬಂಧ ಮಹತ್ವದ್ದಾಗಿದೆ. ಇತ್ತೀಚೆಗೆ ದೇವಾಲಯದ ಶಿಖರವು ಜೀರ್ಣೋದ್ಧಾರಗೊಂಡಿದ್ದು, ಪುರಾತನದ ಗಾರೆ ನಿರ್ಮಿತ ಮೂರ್ತಿಗಳಿಂದ ಅವನ್ನು ಅಲಂಕರಿಸಲಾಗಿದೆ.

ಶಿರವಾಳ ಗ್ರಾಮದ ಸಿದ್ದೇಶ್ವರ ದೇವಾಲಯದಲ್ಲಿ ದೊರೆತಿರುವ ಶಾಸನವು ಸುಮಾರು "೩೫" ಉದ್ದ "೩೦" ಅಂಗುಲವಿದ್ದು, ಈ ಶಾಸನವು ಅತಿ ವಿರಳವಾಗಿ ದೊರೆಯುವ ಕರಿಕಲ್ಲನ್ನು ಬಳಸಿಕೊಂಡು ಅಕ್ಷರಗಳನ್ನು ಕೊರೆಯಲಾಗಿದ್ದು, ಲಿಪಿಶಾಸ್ತ್ರಜ್ಞರ ಪ್ರಕಾರ ಇವು ೧೩ (೧೨)ನೇ ಶತಮಾನದ ಕನ್ನಡ ಅಕ್ಷರಗಳಾಗಿದ್ದವೆಂದು ತಿಳಿದು ಬರುತ್ತದೆ. ಈ ದೇವಾಲಯದ ದಕ್ಷಿಣ ದಿಕ್ಕಿಗೆ ಶಿರವಾಳ ಶಾಸನವನ್ನು ಕಾಣಬಹುದು. ಈ ಶಾಸನವು ೧೧೭೮ರ ಹೊತ್ತಿಗೆ ಹೊರಡಿಸಲಾಗಿದ್ದು, ಮಹಾಮಂಡಳೇಶ್ವರ ಎಳಮೇಳ ಸಿಂಗಿದೇವರಸನ ತಾಯಿ ನಾಗಲದೇವಿ, ಮಹಾಪ್ರಧಾನ ಕೇತನ ನಾಯಕರು ಹಾಗೂ ಯಾದವ ಬಿಲ್ಲಮ ದೇವನ ಅಧಿಕಾರಿ ಅಪ್ಪಯ್ಯ ನಾಯಕನು ಎಳಮೇಲ - ೫೦ರಲ್ಲಿದ್ದ ಮರವಡಿ ಗ್ರಾಮವನ್ನು ಸಿರಿವೊಳಲಸಿದ್ಧ ನಾತೇಶ್ವರ ದೇವರ ಪೂಜಾವಿಧಿಗೆಂದು ತಿಳಿಸುತ್ತದೆ.... ಶಾಂತಿಮಯ್ಯ ಹಾಗೂ ಅವನ ಮಗ ರೇವಣ ದೇವಯ್ಯನ ಪವಾಡಗಳನ್ನು ತಿಳಿಸುತ್ತದೆ. ಇಲ್ಲಿಯ ಗುಡಿಗಳಲ್ಲಿ ಊರಹಳ್ಳದಿಂದಾಚೆಗೆ ಇರುವ ಸುಜ್ಞಾನೇಶ್ವರ, ಶಾಂತಮುತ್ತಯ್ಯ, ನಾಗಯ್ಯ ಹಾಗೂ ನನ್ನಯ್ಯನ ಗುಡಿ ಸಂಕೀರ್ಣವು ಪ್ರಾಚೀನವಾಗಿದ್ದು ಅದರಲ್ಲೂ ನನ್ನಯ್ಯ ಹಾಗೂ ನಾಗಯ್ಯನ ಗುಡಿಗಳು ರಾಷ್ಟ್ರಕೂಟರ ಕಾಲದ ರಚನೆಗಳೆಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ. ಈ ಎರಡೂ ಗುಡಿಗಳು ಗರ್ಭಗೃಹ ಸುಖನಾಸಿ ಅರ್ಧಮಂಟಪ, ಕಿರುಸಭಾಮಂಟಪ, ನವರಂಗ ಹಾಗೂ ದ್ವಾರ ಮಂಟಪಗಳನ್ನು ಹೊಂದಿದ್ದು ಬೃಹತ್ತಾಗಿದೆ. ಗರ್ಭಗೃಹಗಳಲ್ಲಿ ಶಿವಲಿಂಗಗಳಿದ್ದು ಲಲಾಟದಲ್ಲಿ ಗಜಲಕ್ಷ್ಮಿಯನ್ನುಳ್ಳ ತ್ರಿಶಾಖಾಲಂಕೃತ ದ್ವಾರಬಂಧಗಳಿವೆ. ಬೃಹತ್ತಾದ ನವರಂಗದ ಕಂಬಗಳು ಆಕರ್ಷಕವಾಗಿದ್ದು ನಡುವಣ ವೃತ್ತ ಸರಳವಾಗಿದೆ. ಅರ್ಧಮಂಟಪ ಹಾಗೂ ನವರಂಗಗಳ ನಡುವೆ ಇರುವ ಕಿರುಸಭಾಮಂಟಪದ ಭಿತ್ತಿಯಲ್ಲಿ ಸುಂದರವಾದ ಶಿವ ತಾಂಡವ ನೃತ್ಯ ಶಿಲ್ಪ ಕೆತ್ತನೆಯಿರುವ ಜಾಲಂಧ್ರವನ್ನು ಒದಗಿಸುವ ಮೂಲಕ ಬೆಳಕಿನ ವ್ಯವಸ್ಥೆ ಮಾಡಿರುವುದು ಗಮನಾರ್ಹವಾಗಿದೆ. ಆಕರ್ಷಕ ವಾದ ಕೆತ್ತನೆಗಳಿಂದ ಅಲಂಕೃತವಾದ ಅಧಿಷ್ಠಾನದ ಮೇಲೆ ನಿಂತಿರುವ ಈ ಗುಡಿಗಳ ಭಿತ್ತಿಗಳು ಕಿರುಸ್ತಂಭ ಹಾಗೂ ಕಿರುಶಿಖರಗಳನ್ನು ಹೊಂದಿದ್ದು ಮಿಥುನ ಶಿಲ್ಪಗಳೂ ಇವೆ. ಇಲ್ಲಿಯ ಶಾಂತಮುತ್ತಯ್ಯನ ಗುಡಿಯು ಜೀರ್ಣೋದ್ಧಾರಗೊಂಡಿದ್ದು ಅದರ ಬಾಗಿಲವಾಡವು ಸುಮಾರು ೧೦ನೇ ಶತಮಾನದ ಲಕ್ಷಣ ಗಳನ್ನು ಹೊಂದಿದ್ದು, ಈ ಪರಿಸರದಲ್ಲಿ ಸುಮಾರು ೧೦-೧೧ನೇ ಶತಮಾನಕ್ಕೆ ಸೇರಿದ ಸ್ತಂಭಗಳನ್ನು ನೋಡಬಹುದಾಗಿದೆ. ಈ ದೇವಾಲಯದ ಹಿಂಬದಿಯಲ್ಲಿ ಆಕರ್ಷಕವಾದ ಪುಷ್ಕರಣಿ ಇದ್ದು ಅದರ ಭಿತ್ತಿ ಯಲ್ಲಿ ರಾಮಾಯಣದ ಕಥನಾವಳಿಯ ಸುಂದರವಾದ ಉಬ್ಬು ಕೆತ್ತನೆಗಳಿವೆ. ಒಟ್ಟಾರೆ ಈ ದೇಗುಲ ಸಮುಚ್ಚಯವು ರಾಷ್ಟ್ರಕೂಟ ಕಲ್ಯಾಣದ ಚಾಳುಕ್ಯ ಪರಿವರ್ತನಾವಾದಂಥದ್ದೆಂದು ಹೇಳಿದರೆ ತಪ್ಪಾಗಲಾರದು. ಅದರಿಂದ ಇವು ಶಿಥಿಲಾವಸ್ಥೆಯಲ್ಲಿವೆ.

ಶಾಂತಮುತ್ತಯ್ಯನನ್ನು ಕುರಿತು ಶಿರವಾಳ (೧೧೭೦), ಕೆಲ್ಲೂರು (೧೧೭೫), ಹೋತಗಲ್ಲ (೧೧೭೫) ಮತ್ತು ಸಿರವಾಳ (೧೧೭೮). ಹೀಗೆ ೪ ಶಾಸನಗಳು ದೊರೆಯುತ್ತವೆ. ಈ ಶಾಸನಗಳು ಸಿರವಾಳದಲ್ಲಿ ಪ್ರಸಿದ್ಧವಾದ ಸಿದ್ಧಶಾಂತೇಶ್ವರ ದೇವರ ಪೂಜೆಗಾಗಿ ಅವರ ಪುತ್ರ ಸಿದ್ಧರೇವಣ ದೇವನಿಗೆ ದಾನ ನೀಡಿರುವು ದನ್ನು ಹೇಳುವುದರಿಂದ ಈ ಹೊತ್ತಿಗಾಗಲೇ ಶಾಂತಿಮಯ್ಯ (ಶಾಂತಮುತ್ತಯ್ಯ) ನಿಧನ ಹೊಂದಿ ಸಿರವಾಳ

ದಲ್ಲಿ ಸಿದ್ಧಸಾಂತೇಶ್ವರ ಹೆಸರಿನ ದೇವರೆಂದು ಪೂಜೆಗೊಳ್ಳುತ್ತಿದ್ದುದು ಸ್ಪಷ್ಟವಾಗುತ್ತದೆ. ಕ್ರಿ.ಶ. ೧೧೭೮ರಲ್ಲಿ ಸಿರವಾಳ ಶಾಸನದಲ್ಲಿ ಈ ಶಾಂತಿಮಯ್ಯನ ಮಹಿಮೆಯನ್ನು ಹೀಗೆ ಹೇಳಲಾಗಿದೆ.

> "…..ಶಿವಯೋಗಿ ಶಾ(ನ್ತಿ)ಮಯ್ಯಂಗಳ ಮಹಿಮೆಯಂತೆನೆ ಕ್ರತಯುಗ
> ತ್ರೇತೆ ಮೂರನೆಯ ದ್ವಾಪರದೊಲುನೆಗಳ್ದ ಭೂತೋದ್ಭವ
> ಬ್ರತಿತ ಬ್ರತಾನುಕಾರಿಗಳು ದಿವ್ಯ ಸಹಸ್ರ ಶತಾನುಮಬ್ದ ಕಿಂ
> ಕರನು ಹರಯಿ ಬಳಿಕವಾತೆಸೆದೀವನದಂತೆನೆ ಶಾನ್ತಿಮಯ್ಯ
> ತತುಕ್ಷಣದೊಳೆ ಭಕ್ತಿಯ (೦) ಪಡದನೇಂ ಕಲಿವೀರನೊ ವೀರಭದ್ರನೋ."

> "ಶ್ರೀ ಮದಣಿಮಾದ್ಯಷ್ಟಗುಣ ಸಂಪನರುಂ ತತ್ವಜ್ಞಾನ ಪ್ರಸನ್ನರುಂ ಷಡಂಗಯೋಗ
> ಸಂಗದರುಂ ಸರಸಾಭ್ಯ ಸಂಗ ನಿಸಂಗರುಮಪ್ಪ ಶಿವಯೋಗಿ
> ಶಾನ್ತಿಯಯ್ಯದೇವಂಗಳ ಪುತ್ರ ರೇವಣದೇವಯ್ಯಂಗಳ ಪ್ರಸಿದ್ಧಿಕೆಯೆಂತೆನೆ".

ಈ ಶಾಸನದಲ್ಲಿ ಇವನನ್ನು ಎರಡು ಸಲ (ಶಿವಯೋಗಿ) ಎಂದು ಕರೆಯಲಾಗಿದೆ. ಅರ್ಥ ಅಸ್ಪಷ್ಟ ವಾಗಿದ್ದರೂ ಶಾಂತಿಮಯ್ಯ ತತ್‌ಕ್ಷಣದಲ್ಲಿಯೇ ಭಕ್ತಿಗಳಿಸಿದನೆಂದೂ ಅವರು ವೀರನೋ? (ಬೀರಪ್ಪನೋ?), ವೀರಭದ್ರನೋ? ಎಂದು ಆಶ್ಚರ್ಯ ವ್ಯಕ್ತಪಡಿಸಲಾಗಿದೆ. ಮುಂದಿನ ಗದ್ಯದಲ್ಲಿ ಬಳಸಲಾದ 'ಅಷ್ಟಗುಣ ಸಂಪನ್ನ ಷಡಂಗಯೋಗ ಸಂಗತ' ಎಂಬ ವಿಶ್ಲೇಷಣೆಗಳು ಇದರ ಘನತೆಗೆ ಸಾಕ್ಷಿ ನುಡಿಯುತ್ತವೆ.

ಮುಂದಿನ ಆರು ಪದ್ಯಗಳಲ್ಲಿ ರೇವಣಸಿದ್ಧನ ಆರು ಪವಾಡಗಳನ್ನು ಹೇಳಲಾಗಿದೆ. ಇವುಗಳಲ್ಲಿ ಮೂರು ಪವಾಡಗಳು ಹರಿಹರನ 'ರೇವಣಸಿದ್ದೇಶ್ವರ ರಗಳೆ'ಯಲ್ಲಿ ಬರುವುದರಿಂದ ಇಬ್ಬರು ಅಭಿನ್ನರೆಂದೇ ಸ್ಪಷ್ಟವಾಗುತ್ತವೆ. ಇಲ್ಲಿಯ ರೇವಣದೇವನನ್ನು "ಸಿದ್ಧ ಪ್ರಸಿದ್ಧರಪ್ಪ ರೇವಣದೇವಯ್ಯನೆಂದು ಕರೆಯ ಲಾಗಿದ್ದು, ಇಲ್ಲಿಯ 'ಸಿದ್ಧ' ವಿಶ್ಲೇಷಣೆಯ ಸಿದ್ಧ ಪರಂಪರೆಯನ್ನು ಸ್ಪಷ್ಟಪಡಿಸುತ್ತದೆ. ಶಾಂತಿಮಯ್ಯನನ್ನು ಸಿದ್ಧಶಾಂತೇಶ್ವರ ದೇವನೆಂದು ಕರೆಯುವುದನ್ನು ಇಲ್ಲಿ ನೆನೆಯಬಹುದು".[೬]

### ೩.೬.೨ . ತುರುವೆಕೆರೆ ತಾಮ್ರ ಶಾಸನ

ನಾವು ಒಬ್ಬ ವ್ಯಕ್ತಿಯ ಕುರಿತು ಅಧ್ಯಯನ ಮಾಡುವಾಗ ನಮಗೆ ಅನೇಕ ಆಕರಗಳು ಲಭ್ಯ ವಾಗುತ್ತವೆ. ಅವುಗಳಲ್ಲಿ ಸಾಹಿತ್ಯಕವಾಗಿರಬಹುದು. ಮೌಖಿಕವಾಗಿರಬಹುದು ಅಥವಾ ಶಾಸನ ಸಾಹಿತ್ಯವಾಗಿ ರಬಹುದು. ಐತಿಹ್ಯದಂಥ ಕತೆ ಮುಂತಾದ ಆಕರಗಳು ನಮಗೆ ಬಹುಮುಖ್ಯವಾಗಿ ಬೇಕಾಗುತ್ತವೆ. ಇಲ್ಲಿ ಶಾಂತಮುತ್ತಯ್ಯನ ಕುರಿತು ಸಾಹಿತ್ಯಕವಾಗಿ ನೋಡುವ ಸಂದರ್ಭದಲ್ಲಿ ಶಾಂತಮುತ್ತಯ್ಯ ವೈಯಕ್ತಿಕ ಜೀವನದ ಕುರಿತು ಬೆಳಕು ಚೆಲ್ಲುವ ಆಕರಗಳಾದ ಶಾಸನ, ತಾಮ್ರಪತ್ರಗಳು ನಮಗೆ ಮುಖ್ಯವಾಗುತ್ತವೆ. ಆ ಕಾರಣವಾಗಿ ಇಲ್ಲಿ ಶಾಂತಮುತ್ತಯ್ಯನ ಬಗೆಗೆ ಬಂದಿರುವ ತಾಮ್ರಪತ್ರಗಳ ಪಾಠಗಳನ್ನು ಇಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ. ಇಲ್ಲಿ ಅದರ ಪಾಠವನ್ನು ಕೊಡಲಾಗಿದೆ.

**ತುರುವೆಕೆರೆ ತಾಮ್ರಶಾಸನ**

ತುರುವೆಕೆರೆ ತಾಮ್ರಶಾಸನವು ವಿಜಯನಗರದ ದೊರೆಗಳಾದ ವೀರಪ್ರತಾಪ, ರಾಮರಾಜೈಯ್ಯ, ಸದಾಶಿವರಾಯ, ವೆಂಕಟಾದ್ರಿ ರಾಜ ಇವರ ಸಮ್ಮುಖದಲ್ಲಿ ವಿವಿಧ ಸ್ವಾಮೀಜಿಗಳ, ಹಿರಿಯರುಗಳ

ನೇತೃತ್ವದಲ್ಲಿ ಶಾಂತೊಡೆಯರಿಗೂ ಮತ್ತು ಮಂಕೊಡೆಯರಿಗೂ ನಡೆದಿರುವ ಗುರುತನದ ಅಧಿಕಾರದ ವಿವಾದವನ್ನು ದೀರ್ಘವಾಗಿ ನಿರೂಪಿಸುತ್ತದೆ. ರಾಜರ ಸಮ್ಮುಖದಲ್ಲಿ ನಡೆದ ಸಭೆಯಲ್ಲಿ ಶಾಂತಮುತ್ತಯ್ಯ ನವರಿಗೆ ನೀವು ಕುರುಬ ಕುಲದವರಿಗೆ ಗುರುವಾದುದು ಹೇಗೆಂದು ನಿಮಗೆ ಮುರುಹು ಮುದ್ರೆ ಮೂರಡಿಯ ಕಂಥೆ ಬಂದುದು ಹೇಗೆಂದು ಕೇಳಲಾಗಿ ಶಾಂತಮುತ್ತಯ್ಯನವರೇ ಆಡಿದ ಮಾತು- "ಆ ಕಲ್ಯಾಣಪುರದಲ್ಲಿ ಸತ್ತ ಕುರಿಯನು ಹೆತ್ತ ಮೊಸರನು ಎರಡನು ಕೂಡಿವೆಂದುಕ ಗುಡಿಯಲಿರೆ ಕುರುಬರು ಮಾರಲಾಗಿ ಆ ಕಲ್ಯಾಣಪುರದ ಗಣಂಗಳು ಬಸವಂಣನು | ಹೆಂಗೆ ಸತ್ತ ಕುರಿಯನು ಹೆರ್‍ತ್ತೆ ಮೊಸರನು | ಹೀಗೆ ಕುರುಬರು ಮಾರಬಹುದು ಎಂದು ಕರುಬರೆಯೇಳು ಬೆಲೆಯಿಂದ್ರ ಹೊರಹಾಕಲಾಗಿ ಆ ಕುರುಬರು ಬಂದು ನಮಗೆದುರಾಗಿ ನಂಮ ಕಲ್ಯಾಣ ಪಟ್ಟಣದೊಳಗೆ | ಕಿನ್ನರಿ ಬ್ರಹ್ಮಯ್ಯನವರ ಲಿಂಗ ಮುದ್ರೆಯ ತಗರು ಸಾಯಲಾಗಿ ಸತ್ತ ತಗರ ಕಲ್ಯಾಣಕ್ಕೆ ಹಿಡಿಸಿಕೊಂಡು ಹೋಗಿ | ಪುಷ್ಪಕದಲ್ಲಿ ಕೊಂಡು ಹೋಗಿ ನಂಮ ಗುರುರೇವಣಸಿದ್ಧೇಶ್ವರ ದೇವರ ಸ್ತುತಿಸಿ ಬಂದು ತೀರ್ಥಪ್ರಸಾದವನ್ನು ತಳಿದು | ಆ ಸತ್ತ ತಗರಿನ ಪ್ರಾಣವನ್ನು ಪಡೆದೆವು. ಆ ಕಲ್ಯಾಣದಲ್ಲಿ ಪುರದ ಬಸವಣ್ಣನು | ಮಹಾಮಹಾಂತ ಶರಣರು. ಮೆಚ್ಚಿ ಮುರುಹು ಮುದ್ರೆ ಮೂರಡಿಯ ಕಂಥೆಯನು ಕೊಟ್ಟು ಹೊರಹಾಕಿದ ಕುರುಬರನು ಕುಲವನು. ವಳಿಯಕೆ ತೆಗೆದುಕೊಂಡು ಕುರುಬರೆಲ್ಲರಿಗೂ ಗುರುವಾಗಿರುಯಂದು ಆ ಕುರುಬರಿಗೆ ವಿಭೂತಿ ಧರಿಸಿಕೊಂಡು ಯಿರಿಯಂದರು | ಆ ಬಸವಂಣನು ಮಹಾಸರಣನು ಅರಭ್ಯ ಮೊದಲು ಕಂಥೆ ಬಂದುದು ಗುರುವಾದ ವಿವರ ಬುಂದಿಗ ಯಂದು ಶಾಂತಮುತ್ತಯ್ಯನವರು ಆಡಿದರು|.

ನಂತರ ಸಭೆಯವರು ಮಂಕನವರಿಗೆ ನಿಮಗೆ ಮುರುಹು ಮುದ್ರೆ ಮೂರಡಿಯ ಕಂಥೆ ಬಂದುದು ಹೇಗೆ ಕುರುಬರಿಗೆ ಗುರುವಾದುದು ಹೇಗೆ ಎಂದು ಕೇಳಲಾಗಿ ಮಂಕನವರು ಆಡಿದ ಮಾತು - "ಕೋಡುಗಲ್ಲಿನ ಮೇಲೆ ಹಂನ್ನೆರಡು ಬಟ್ಟಲಿರಿಸಿ ಆ ಸೂಜಿಬಟ್ಟಲ ಮೇಲೆ ಹಂನೆರಡು ವರುಷ ತಪಸ ಮಾಡಲಾಗಿ | ಈಶ್ವರನು ಮೆಚ್ಚಿ ಪ್ರಸಂನವಾಗಿ ನಮಗೆ ಮುರುಹು ಮುದ್ರೆ ಮೂರಡಿಯಕಂಥೆಯನು ಕೊಟ್ಟು ಕುರುಬಗುಲಿಕೆ ಗುರುವಾಗಿರಿಯಂದು | ಮಂಕನವರು ಅಡಲಾಗಿ ಸಭೆ ಸಮಸ್ತರು | ನಿನು ಯಿಂಥಾ ಪ್ರಸಂಗಸ ಆ ಯುಗದಲ್ಲಿ ನಡೆದಿದೆಯಂದು ಸಭೆ ಕೇಳಲಾಗಿಯಿ ಕಲಿಯುಗದಲ್ಲಿ ಯಿಂದ್ರ ಉಗ್ರ ತಪಸ್ಸು ಆರು ಮಾಡಿದವರು ಯಿಲ್ಲ | ಪೂರ್ವದಲಿ ಬಸವ ವಿಜ್ಜಣನ ಕಾಲದಲ್ಲಿ ತಪಸು ಮಾಡಿದೇಉ | ಎಂದು ಮಂಕನವರು ಅಡಲಾಗಿ ಆ ಮಾತ ಕೇಳಿಸಿದಂತೆ ಸಮಸ್ತ ಪ್ರಜೆಗಳು ಸರ್ವರೆಲ್ಲ ಕೇಳಿ | ಆಗ ಮಗಳ ನೋಡಿಯಿ ಕಲಿಯುಗದಲಿ ಯಿಂತಾ ಉಗ್ರ ತಪಸನಾರು ಮಾಡಿದವರುಯಿಲ್ಲ ಪೂರ್ವದಲಿ | ಪಾರ್ವತಿ ದೇವಿಯರು ಯಂದೆಂದುಗೂ ಜನನ ಮರಣವಿಲ್ಲದಂತಾ ಪುರುಷನಾಗಬೇಕೆಂದು ಪರಮೇಶ್ವರನ ಕುಕ್ಕಟ ತಪಸ ಮಾಡಿದ | ಯಿ ಕಲಿಯುಗದಲಿ ಹೀಗೆ ಆರು ತಪಸ ಮಾಡಿದವರು ಯಿಲ್ಲ ಮಂಕನವರ ಮಾತು ಬಿಳು ಸೋಲವೆಂದು ಕಟಕಿಯ ಮಾಡಿದರು | ನಿಂನ ಗುರು ಸೊನ್ನಲಾಪುದ ಸಿದ್ಧರಾಮದೇವರಿಗೆ ತಂದೆ ತಾಯಿ ಉಂಟು ಫಲ ಉಂಟು ನಿನಗೆ ತಂದೆ ತಾಯಿಲ್ಲ | ಕುಲವಿಲ್ಲ ಯಿ

ಯರಡು ಬಗೆಯಲ್ಲಿ ನಿಂನ ಮಾತು ಸೋಲಯಂದು ಸಭೆಯಂನೆಲವಾಗಿ | ಮಂಕನವರು ಆಡಿದ ಮಾತು ತಂತಮು ಕುಲ ಸೇನೆ ಕುಲವೆಂದು ಆಡಲಾಗಿ | ಸೇನೆ ಕುಲವೆಂದರೆ ಹಾಲುಕುಲವಾಯಿತ್ತು | ಮೊದಲು ಕುಲವಿಲ್ಲ ವೆಂದಗೆ ಯಂಗೆ ಕುಲದ ಹೇಳಿದೆ | ಇದರಿಂದ ಮರು ಮಾತಿನಲು ನಿಂನ ಮಾತು ಸೋಲ | ನಿನಗೆ ಗುರುತನಕೆ ಕೆಲಸವಿಲ್ಲವೆಂದು | ಸಭೆಯಂನಲಾಗಿ ಹಾಲುಮತದ ಕುರುಬ ಕುಲಕೆ ಶಾಂತಮುತ್ತಯ್ಯ ನವರ ಗುರುಗಳು | ಮಂಕನಾದರೆ ಗುರುತನಕೆ. ಕಾರಣವಿಲ್ಲ ಎಂದು | ಸಭೆಯಲು. ಕೂಡಿ ಸಮಸ್ತರು ಮಠ ಮನೆಯ ಹಿರಿಯರುಗಳು ಮಹಾಮಹಾಂತು ಸಮಸ್ತರೆಲ್ಲಾರು | ಯಿ ಅರ್ಥಕೆ ವಂದು ಮೋಲೆ ಬರೆಸಿ ವೊದಿಸಿ ತೋರ್ರಿ ಬಿಂನಹ ಮಾಡಿ | ಆ ತಿರುಮಲಾರಜೆಯ್ಯನವರು ರಾಮರಾಜಯ್ಯನವರು | ವೆಂಕಟಾದ್ರಿ ರಾಜಯ್ಯನವರು ಯಿವರು ಅರಸುಗಳು ನ್ಯಾಯದಲ್ಲಿ | ಗೆದ್ದ. ಶಾಂತಮುತ್ತಯ್ಯನವರಿಗೆ ವಿರೂಪಾಕ್ಷ ದೇವರ ಸೋಮವಾರದ ಬಾಗಿಲಲಿ ಕುರುಬರೆಂಬ ಜಾತಿಗೆ ಮಂಕನವರಿಗೆ ಕಾರಣವಿಲ್ಲ | ಶಾಂತಮುತ್ತಯ್ಯನವರ ಗುರುಉಗಳೆಂದು ಹೊಯಿಸಿ ಕೊಟ್ಟ ಸ್ಥಿರ ಶಾಸನವು....."[೬]

ಪ್ರಸ್ತುತ ಶಾಸನದಲ್ಲಿ ಬಂದಿರುವ ವಿವರಣೆಯನ್ನು ಗಮನಿಸಿದರೆ ಕುರುಬ ಕುಲಕ್ಕೆ ಗುರುಗಳಾಗಿ ರುವವರು ಸರೂರು ಶಾಂತಿಮುತ್ತಯ್ಯನವರು ಎಂಬುದು ಸ್ಪಷ್ಟವಾಗುತ್ತದೆ. ರೇವಣಸಿದ್ಧನ ಶಿಷ್ಯನಾದ ಶಾಂತಮುತ್ತಯ್ಯನವರು ಕಲ್ಯಾಣ ಪಟ್ಟಣದಲ್ಲಿ ತಗರ ಪವಾಡವೊಂದನ್ನು ಮೆರೆದು ಹೊರಹಾಕಲ್ಪಟ್ಟ ಕುರುಬರನ್ನು ಮರಳಿ ಕಲ್ಯಾಣ ಪಟ್ಟಣದೊಳಗೆ ಬರುವಂತೆ ಮಾಡಿರುವವರು. ಅದೇ ಸಂದರ್ಭದಲ್ಲಿ ಬಸವಣ್ಣನವರು ಕುರುಬ ಕುಲಕ್ಕೆ ಗುರುವಾಗೆಂದು ಹರಸಿ ಮೂರೇಣಿನ ಕಂಥೆಯನ್ನು ದಯಪಾಲಿಸಿದ ಸಂಗತಿಯನ್ನು ಶಾಸನವು ಹೇಳುವುದರಿಂದ ಇದೇ ವಿಚಾರವನ್ನು 'ತಗರ ಪವಾಡ' ಕೃತಿಯು ನಿರೂಪಿಸುವು ದರಿಂದ ನಿಜವಾಗಿಯೂ ಕುರುಬ ಕುಲಕ್ಕೆ ಗುರುಗಳಾಗಿರುವ ಅಧಿಕಾರ ಶಾಂತಮುತ್ತಯ್ಯನ ಸಂತತಿಯವರಾದ ಶಾಂತೊಡೆಯರಿಗಿದೆ ಎನಿಸುತ್ತದೆ. ಶಾಂತಯ್ಯನಿಗೆ ಬಸವಣ್ಣನವರು 'ಮೂರೇಣಿನ ಕಂಥೆ'ಯನ್ನು ನೀಡಿರುವು ದರ ಸಂಕೇತದ ಕುರುಹಾಗಿ ಮಾಡುವ ಆಚರಣೆಯೆಂದು ಈ ಸಂಪ್ರದಾಯದ ಒಡೆಯರುಗಳಲ್ಲಿ ಇದೆ. ಅದುವೇ ತಮ್ಮ ಗುರುವಾದ ರೇವಣಸಿದ್ಧನಿಗೆ "ಕಂಥೆಯನು ಮಡುಗುವ" ಆಚರಣೆ. ಈ ಎಲ್ಲ ಐತಿಹಾಸಿಕ ಆಧಾರಗಳನ್ನು ಗಮನಿಸಿದರೆ ಕುರುಬ ಕುಲದವರಿಗೆ ಕುಲ ಗುರುಗಳಾಗುವ ಅಧಿಕಾರ ರೇವಣಸಿದ್ಧ ಸಂಪ್ರದಾಯದ ಶಾಂತೊಡೆಯರಿಗೆ ಇರಬೇಕು ಎನಿಸುತ್ತದೆ.

ಈ ಶಾಸನವು ಬಹುಮುಖ್ಯವಾಗಿ ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆಯನ್ನು ಕೊಟ್ಟವರು ಯಾರು ಎಂದು ಜನರು ಎದುರು ವಾದಿಸಿದಾಗ ಅದರ ಸತ್ಯವನ್ನು ಹೇಳುವುದಕ್ಕಾಗಿ ಈ ಶಾಸನ | ಪತ್ರವನ್ನು ರಾಜನು, ಪ್ರಜೆಗಳ, ಊರಿನ ಗಣ್ಯರಾದ ಶ್ಯಾನುಭೋಗ, ತಳವಾರ, ಊರಿನ ಹಿರಿಯರೆ ಸಮ್ಮುಖದಲ್ಲಿ ಖುದ್ದಾಗಿ ಶಾಂತಮುತ್ತಯ್ಯ ಮತ್ತೆ ಮತ್ತೆ ಅವನಿಗೆ ಲಿಂಗದೀಕ್ಷೆ ಕೊಟ್ಟ ವಿವರವನ್ನು ಕಾಣುತ್ತೇವೆ. ಇದರಿಂದ ಶಾಂತಮುತ್ತಯ್ಯ ಕುರುಬರ ಕುಲದ ಗುರುವಿನ ಸ್ವರೂಪದಲ್ಲಿರುವ ಕುಲ ಉದ್ಧರಿಸಲು ಮತ್ತು ಅವರ ದೈವ ರೇವಣಸಿದ್ಧೇಶ್ವರರು ಎಂದು ಗೊತ್ತಾಗುತ್ತದೆ.

**ಟಿಪ್ಪಣಿಗಳು**

೧. ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), **ತಗರ ಪವಾಡ.**

೨. ಎಫ್.ಟಿ. ಹಳ್ಳಿಕೇರಿ (ಸಂ), **ರಸ್ತಾಪುರ ಭೀಮಕವಿಯ ಹಾಲ್ಮತೋತ್ತೇಜಕ ಪುರಾಣ.**

೩. **South Indian Inseriptions : Vol. XV.,** P. 233. **ಸಿದ್ಧರಾಮ ಸಾಹಿತ್ಯ ಸಮೀಕ್ಷೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೬೯ ರಿಂದ ಉದ್ಧೃತ.

೪. ಡಾ. ವೀರಣ್ಣ ದಂಡೆ (ಸಂ), **ಜನಪದ ಹಾಲುಮತ ಮಹಾಕಾವ್ಯ.**

೫. **ಶ್ರೀ ಗುರು ಶಾಂತವಿಜಯ, ಪೌರಾಣಿಕ ನಾಟಕ.**

೬. ಎಂ.ಎಂ. ಕಲಬುರ್ಗಿ, **ಮಾರ್ಗ-೪**, ಪು. ೩೮೧.

೭ ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), **ತಗರ ಪವಾಡ**, ಅನುಬಂಧ ಪು. ೧೦೨-೧೦೪.

• • •

# ಅಧ್ಯಾಯ ನಾಲ್ಕು

# ಆಚರಣೆ, ಉತ್ಸವ ಸಂಪ್ರದಾಯಗಳು

# ಅಧ್ಯಾಯ ನಾಲ್ಕು

# ಆಚರಣೆ, ಉತ್ಸವ ಸಂಪ್ರದಾಯಗಳು

### ೪.೧. ಆಚರಣೆಗಳು

ಪ್ರತಿಯೊಂದು ಜನಾಂಗವು ತಾನು ಬಾಳುವ ಪರಿಸರ, ಆಯ್ದುಕೊಂಡ ಉದ್ಯೋಗ, ಒಡನಾಡಿ ಜನರೊಂದಿಗೆ ವ್ಯವಹರಿಸುವ ರೀತಿ ಇವುಗಳಿಗೆ ತಕ್ಕಂತೆ ಆಹಾರ ಪದ್ಧತಿ, ಉಡುಗೆ-ತೊಡುಗೆ, ಆಚಾರ-ವಿಚಾರ, ನಂಬಿಕೆ-ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿರುತ್ತದೆ. ಹಾಗೆಯೇ ತನ್ನ ನಂಬಿಕೆಗನುಸಾರವಾಗಿ ದೈವಭಕ್ತಿ, ಆರಾಧನ ವಿಧಾನಗಳನ್ನು ಆಚರಣೆಗೆ ತಂದಿರುತ್ತದೆ. ಈ ಹಿನ್ನೆಲೆಯಲ್ಲಿಯೇ ಜನಾಂಗಗಳ ಸಂಸ್ಕೃತಿಯು ರೂಪುಗೊಳ್ಳುತ್ತದೆ ಎಂದು ಹೇಳಬಹುದು. ಜೊತೆಗೆ ಈ ಜನಾಂಗಗಳ ಮತ್ತೊಂದು ವೈಶಿಷ್ಟ್ಯವೆಂದರೆ ಅದೆಷ್ಟೋ ತನ್ನ ಸಂಸ್ಕೃತಿಯನ್ನು ಯಥಾವತ್ತಾಗಿ ಕಾಪಾಡಿಕೊಂಡು ಬರುವುದೇ ಆಗಿರುತ್ತದೆ. ಇದಕ್ಕೆ ಕರ್ನಾಟಕದ ಕುರುಬ ಜನಾಂಗವೂ ಹೊರತಾಗಿಲ್ಲ. ಪ್ರಾಚೀನ ಕಾಲದಿಂದಲೂ ಪಶುಪಾಲನೆ ಅದರಲ್ಲಿಯೂ ಕುರಿ ಸಾಕಾಣಿಕೆ, ಕಂಬಳಿನೇಯ್ಗೆ ಮತ್ತು ಕೃಷಿಯನ್ನು ಪ್ರಧಾನ ಕಸುಬನ್ನಾಗಿ ಮಾಡಿಕೊಂಡು ಬಂದಿರುವ ಇವರು ತಮ್ಮದೇ ಆದ ಆಚರಣೆ, ನಂಬಿಕೆ, ಸಂಪ್ರದಾಯಗಳನ್ನು ಹೊಂದಿದ್ದಾರೆ. ತಮ್ಮ ಸಂಸ್ಕೃತಿಯ ಸೊಗಡನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಆಚರಣೆಗಳಲ್ಲಿ ಅವರ ಸಂಸ್ಕಾರ, ಅಂತರಾಳದ ಜೀವಂತ ಮಿಡಿತವನ್ನು ಈಗಲೂ ಕಂಡುಕೊಳ್ಳಬಹುದುದಾಗಿದೆ. ಶಾಂತಮುತ್ತಯ್ಯನಿಗೆ ಸಂಬಂಧಿಸಿದ ಆಚರಣೆ ಹಾಗೂ ಉತ್ಸವಗಳನ್ನು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಸಾಮಾನ್ಯವಾಗಿ ಕುರುಬರ ಮದುವೆಗಳು ಕುಲಗುರುಗಳಾದ ಒಡೆಯರುಗಳ ನೇತೃತ್ವದಲ್ಲಿಯೇ ನಡೆಯುತ್ತವೆ. ಈ ಒಡೆಯರುಗಳು ಇರದೇ ಇದ್ದಲ್ಲಿ ಲಿಂಗಾಯತ, ಜಂಗಮರು, ಕುರುಬರ ಲಗ್ನದಲ್ಲಿ ಪೌರೋಹಿತ್ಯ ಕಾರ್ಯವನ್ನು ನಿರ್ವಹಿಸುತ್ತಾರೆ. ಇದು ಒಂದು ರೀತಿಯಲ್ಲಿ ಕುರುಬರ ಮತ್ತು ಲಿಂಗಾಯತರ ಸಾಮಾಜಿಕ, ಧಾರ್ಮಿಕ ಸಂಬಂಧವನ್ನು ಸೂಚಿಸುತ್ತದೆ. ಆದರೆ ಕುರುಬರು ತಮ್ಮ ಮದುವೆಗೆ ಬ್ರಾಹ್ಮಣ ಪುರೋಹಿತರನ್ನು ಕರೆಯಿಸುವುದಿಲ್ಲ. ಇತ್ತೀಚೆಗೆ ಆಧುನಿಕತೆಯ ಪ್ರಭಾವದಿಂದ ಕೆಲವರು ಬ್ರಾಹ್ಮಣ ಪುರೋಹಿತರನ್ನು ಕರೆಸುತ್ತಿರುವುದು ಕಂಡುಬರುತ್ತಿದೆ. ರಾಯಚೂರು, ಬಳ್ಳಾರಿ, ಗದಗ, ಹುಬ್ಬಳ್ಳಿ, ಧಾರವಾಡ ಪ್ರದೇಶಗಳಲ್ಲಿ ಈ ವಿಧಾನ ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಇಂಥ ಉದಾಹರಣೆಗಳು ಕ್ವಚಿತ್ತಾಗಿ ಕಂಡು ಬರುತ್ತವೆ. ಕುರುಬ ಒಡೆಯರಯ್ಯಗಳು ಕುರುಬ ಜನಾಂಗದವರ ಮದುವೆಗಳಲ್ಲಿ

ಪುರೋಹಿತನ ಕಾರ್ಯವನ್ನು ನಿರ್ವಹಿಸಿ ಆ ಮದುವೆಗೆ ಒಂದು ರೀತಿಯ ಧಾರ್ಮಿಕ ಸ್ವರೂಪವನ್ನು ಮತ್ತು ಪಾವಿತ್ರ್ಯವನ್ನು ತಂದುಕೊಡುತ್ತಾರೆ. ಕುರುಬರ ವಧು-ವರರಿಗೆ ಮುತ್ತೈದೆಯರು ಸುರಗಿ ನೂಲನ್ನು ಸುತ್ತಿ ಹಸೆಮಣೆಯ ಮೇಲೆ ಕೂಡ್ರಿಸಿ ಎಣ್ಣೆ ಇಟ್ಟು, ಅರಿಷಣವನ್ನು ಹಚ್ಚಿ, ಸ್ನಾನ ಮಾಡಿಸಿ, ಹೊಸ ಬಟ್ಟೆ ಧರಿಸುತ್ತಾರೆ. ಒಡೆಯರು ಕರಿಯ ಕಂಬಳಿ ಗದ್ದುಗೆಯ ಮೇಲೆ ಕುಳಿತು ವಧುವರರಿಗೆ ಕಂಕಣ ಧಾರಣೆಯನ್ನು ಮಾಡಿಸಿ "ತಾಳಿಯನ್ನು ಪೂಜಿಸಿ ಹುಡುಗನಿಂದ ಹುಡುಗಿಗೆ ಕಟ್ಟಿಸುತ್ತಾರೆ. ನಂತರ ವಧು-ವರರಿಗೆ ಹರಸುವ ಮಂತ್ರ ಹೀಗಿದೆ.

ವಧು - ವರರಿಬ್ಬರಿಗೂ

ಕಲಿ ಕಲಿಯಾಗಿ<br>
ಕರ್ಯಜ್ಜನಾಗಿ<br>
ಭೀಮಣ್ಣನಾಗಿ<br>
ಭಿಲ್ಲರಾಜ್ಯವನಾಳಿ<br>
ಗುರು ರೇವಣಸಿದ್ಧ ಕಟ್ಟಿದ<br>
ಸೇಸೆ ಸ್ಥಿರವಾಗಿರಲಿ<br>
"ಸರೂರು ಶಾಂತಮುತ್ತಯ್ಯ<br>
ಕಟ್ಟಿಸಿದ ಕಲ್ಯಾಣ ಸ್ಥಿರವಾಗಿರಲಿ<br>
ಸೋಬತಿ ಸೋಬಾನ<br>
ಸೋಬತಿ ಸೋಬಾನ"[18]

ಕೆಲವು ಕಡೆ ಈ ಮೇಲಿನ ಮಂತ್ರಕ್ಕೆ ಬದಲಾಗಿ "ತಾರಾಬಲ ಚಂದ್ರಬಲ ತದೇವ ಲಗ್ನಂ" ಎಂದು ಒಡೆಯರು ವಧುವರರಿಗೆ ಶುಭ ಹಾರೈಕೆಯ ಮಂತ್ರವನ್ನು ಹೇಳುತ್ತಾರೆ. ಆಮೇಲೆ ತೆಂಗಿನಕಾಯಿ ಮುಚ್ಚಿದ ಹಾಲಿನ ಕರಗದಿಂದ ಹುಡುಗ-ಹುಡುಗಿಯರ ಕೈಗೆ ಎಲ್ಲರಿಂದ ಹಾಲು ಎರೆಯಿಸುತ್ತಾರೆ. ಇಬ್ಬರಿಗೂ ಸಂಬಂಧ ಮಾಲೆಯನ್ನು ಪರಸ್ಪರ ಹಾಕಿಸಿ, ಅಡಕೆಯ ಗೋಟನ್ನು ವಸ್ತ್ರದ ಒಳಗಿಟ್ಟು ಇಬ್ಬರ ಸೆರಗಿಗೂ ಗಂಟು ಹಾಕಿಸುತ್ತಾರೆ. ಇದನ್ನು 'ಬ್ರಹ್ಮಗಂಟು' ಎಂದು ಕರೆಯುತ್ತಾರೆ. ಇಲ್ಲಿಗೆ ಮದುವೆಯ ಆಚರಣೆಯ ಮುಖ್ಯಭಾಗವು ಮುಗಿಯುತ್ತದೆ. ಹೀಗೆ ಕುರುಬರ ಮದುವೆಯ ಪೌರೋಹಿತ್ಯ ವನ್ನು ನಿರ್ವಹಿಸಿದ್ದಕ್ಕೆ ಒಡೆಯರಯ್ಯಗಳಿಗೆ ೧೦೧, ೨೦೧ ಅಥವಾ ೫೦೧ ರೂ.ಗಳವರೆಗೆ ದಕ್ಷಿಣೆಯನ್ನು ಕೊಡುತ್ತಾರೆ. ಈ ವಿಧಾನವು ಕರ್ನಾಟಕದಾದ್ಯಂತ ಪ್ರಚಲಿತದಲ್ಲಿ ಇಲ್ಲ. ತುಮಕೂರು ಜಿಲ್ಲೆ ಚಿಕ್ಕನಾಯಕನ ಹಳ್ಳಿ ತಾಲೂಕಿನ ಪ್ರದೇಶಗಳಲ್ಲಿ ಕೇಲವ ೫/- ರೂಪಾಯಿ ಕೊಡುತ್ತಾರೆ. ಹೀಗೆ ಗುರುದಕ್ಷಿಣೆ ಕೊಡುವ ಪದ್ಧತಿಯಲ್ಲಿ ಪ್ರಾದೇಶಿಕ ಭಿನ್ನತೆಗಳಿವೆ. ಜೊತೆಗೆ ಮದುವೆಯ ಚಾಜದಲ್ಲಿ ಬಳಿಸಿದ ಅಕ್ಕಿ, ಬೇಳೆ, ಕೊಬ್ಬರಿ, ತೆಂಗಿನಕಾಯಿ ಇತ್ಯಾದಿ ವಸ್ತುಗಳು ಪುರೋಹಿತರಿಗೆ ಸೇರುತ್ತವೆ. ಆರಂಭಿಕ ಕಾಲ ಘಟ್ಟದಲ್ಲಿ ಈ ವಸ್ತುಗಳನ್ನು ಮಾತ್ರ ಕೊಡುವ ಪದ್ಧತಿ ಇತ್ತು. ಇತ್ತೀಚೆಗೆ ಹಣ ಕೊಡುವ ಪದ್ಧತಿ ಆರಂಭವಾಗಿದೆ. ಈ ಒಡೆಯರುಗಳ ಊರು ದೂರವಿದ್ದರೆ ಬಸ್ಸು ಚಾರ್ಜುಸಹಿತ ಕೊಟ್ಟು ಕಳಿಸುವ ಪರಂಪರೆ ಗಮನ ಸೆಳೆಯುತ್ತದೆ.

## ೪.೧.೧. ಮದುವೆಯ ಆಚರಣೆಗಳು

ಮದುವೆಗೆ ಮುಂಚೆ ನಡೆಯುವ ಆಚರಣೆಗಳಲ್ಲಿ ಬಹುಮುಖ್ಯವಾದುದು ಲಿಂಗದೀಕ್ಷೆಯ ಕಾರ್ಯ. ಒಡೆಯರು ತಮ್ಮ ಮನೆಗೆ ಸೊಸೆಯಾಗಿ ಬರುವ ಕುರುಬರ ಹುಡುಗಿಗೆ ಶಾಸ್ತ್ರೋಕ್ತವಾಗಿ "ಲಿಂಗದೀಕ್ಷೆ" ಯನ್ನು ಮಾಡುತ್ತಾರೆ. ಈ ಲಿಂಗದೀಕ್ಷೆಯ ರೇವಣಸಿದ್ಧೇಶ್ವರ ದೇವಸ್ಥಾನದಲ್ಲಿ ನಡೆಯುವ ಪದ್ಧತಿ, ಒಡೆಯರ ಮನೆಗೆ ಸೊಸೆಯಾಗಿ ಬರುವ ಕುರುಬರ ಹುಡುಗಿಯ ತಲೆಯ ಮೇಲೆ ಹಿರಿಯ ಒಡೆಯರು ಪಾದವಿಟ್ಟು ಮಂಗಳ ಸ್ನಾನವನ್ನು ಮಾಡಿಸುತ್ತಾರೆ. ಕೆಲವು ಕಡೆಗಳಲ್ಲಿ ಸೊಸೆಯಾಗಿ ಬರುವ ಕನ್ಯೆಯ ಮುಂಡೆಯನ್ನು ತೆಗೆಯುವ ಪದ್ಧತಿಯೂ ಇರುವುದು. ನಂತರ ಅವಳಿಗೆ ದೀಕ್ಷೆಯ ವಸ್ತುಗಳನ್ನು ತೊಡಿಸುತ್ತಾರೆ. ಆಮೇಲೆ ಅವಳ ಉಡಿಯಲ್ಲಿ ಬಾಳೆಯ ಎಲೆಯನ್ನು ಇಟ್ಟು ಅದರಲ್ಲಿ ಐದು ಬಗೆಯ ಮರದ ಚಕ್ಕೆಯ ಕೆಂಡವನ್ನು ಹಾಕಿ ರೇವಣ್ಣಸ್ವಾಮಿಯ ದೇವಸ್ಥಾನದ ಪ್ರದಕ್ಷಿಣೆಯನ್ನು ಹಾಕಿಸುತ್ತಾರೆ. "ಹೀಗೆ ರೇವಣ್ಣಸ್ವಾಮಿಯ ದೇವಸ್ಥಾನದ ಪ್ರದಕ್ಷಣೆಯನ್ನು ಹಾಕುವಾಗ ಅಕಸ್ಮಾತಾಗಿ ಅವಳ ಮಡಿಲು ಏನಾದರೂ ಸುಟ್ಟರೆ ಅದು ಅಶುಭವವೆಂದೂ ಅವಳ ನಡತೆ ಸರಿಯಿಲ್ಲವೆಂದು ಭಾವಿಸುತ್ತಾರೆ.[೧] ಹೀಗೆ ಪ್ರದಕ್ಷಿಣೆ ಹಾಕಿ ಬಂದ ಮೇಲೆ ಬೇವಿನಕಡ್ಡಿಯಿಂದ ನಾಲಿಗೆಯನ್ನು ಸುಟ್ಟು, ಗೋಮೂತ್ರದಿಂದ ನಾಲಿಗೆ ಯನ್ನು ತೊಳೆದು ಶುದ್ಧೀಕರಿಸುವ ಪದ್ಧತಿ ಇವರಲ್ಲಿದೆ. ಈ ಶುದ್ಧೀಕರಣ ಕ್ರಿಯೆ ಮುಗಿದ ಮೇಲೆ ರೇವಣ್ಣಸ್ವಾಮಿಯ ಗುಡಿಯಲ್ಲಿ ಶಿವಸ್ವರೂಪಿಯಾದ ಸ್ವಾಮಿಯ ಎದುರುಗಡೆಗೂ ಕರಿಯ ಕಂಬಳಿಯ ಗದ್ದುಗೆಯನ್ನು ಹಾಕಿ, ಅದರ ಮೇಲೆ ಒಸೆಯನು ಹೊಯ್ದು, ಅವಳನ್ನು ಪದ್ಮಾಸನದಲ್ಲಿ ಕೂಡಿಸುತ್ತಾರೆ. ಆ ಮೇಲೆ ಪಂಚಕಲಶವನ್ನು ಹೂಡಿ ಸುರಗಿಯ ನೂಲನ್ನು ಸುತ್ತುತ್ತಾರೆ. ರೇವಣ್ಣಸ್ವಾಮಿಯ ಕೊರಳಿನಿಂದ ನೂಲನ್ನು ತಂದು ಅದನ್ನು ಕನ್ಯೆಯ ಕೊರಳಿಗೆ ಹಾಕುತ್ತಾರೆ. ಇದನ್ನು 'ಸೂತ್ರ ಅಥವಾ ಸೂತ್ರ'ವೆಂದು ಕರೆಯುತ್ತಾರೆ. ರೇವಣ ಸ್ವಾಮಿಯ ಮುಂದೆ ಕೆಂಪು ವಸ್ತ್ರದಲ್ಲಿ ಕಟ್ಟಿ ಇಟ್ಟಿರುವ ಕಂಥೆಯ ಲಿಂಗವನ್ನು ಐದು ಜನ ಹಿರಿಯ ಒಡೆಯರು ಆ ಸೂತ್ರದ ಮೂಲಕ ರೇವಣ್ಣಸ್ವಾಮಿಯ ಹೆಸರನ್ನು ಹೇಳಿ, ಅವಳ ಕೊರಳಿಗೆ ಕಟ್ಟುತ್ತಾರೆ. ಹಾಗೆಯೇ ಅವಳ ಕಿವಿಯಲ್ಲಿ "ಓಂ ನಮಃ ಶಿವಾಯಃ" ಎಂಬ ಮಂತ್ರವನ್ನು ಬೋಧಿಸುತ್ತಾರೆ. ಇದೇ ಸಂದರ್ಭದಲ್ಲಿ ಒಡೆಯರ ಹುಡುಗನಿಗೂ ಲಿಂಗದೀಕ್ಷೆ ಮಾಡುತ್ತಾರೆ. ಐದು ಜನ ಒಡೆಯರು ಹುಡುಗನ ನೆತ್ತಿಯ ಮೇಲೆ ಪಾದವಿಟ್ಟು ಕಾಲು ತೊಳೆದು ಆ ನೀರಿನಿಂದ ಹುಡುಗನನ್ನು ಶುದ್ಧಿ ಮಾಡಲಾಗುತ್ತದೆ. ನಂತರ ಅವನಿಗೂ ಸೂತ್ರದ ಮೂಲಕ ಲಿಂಗದೀಕ್ಷೆ ಮಾಡಲಾಗುತ್ತದೆ. ಬಳಿಕ ಅವರಿಬ್ಬರ ಕೈಗೂ ಜೋಳಿಗೆ ಬೆತ್ತಗಳನ್ನು ಕೊಟ್ಟು 'ಕೋರಾಣ್ಯ'ಭೀಕ್ಷೆಗೆ ಕಳುಹಿಸುತ್ತಾರೆ. "ಅಂದಿನಿಂದ ಒಡೆಯರ ಹುಡುಗಿ ನಿಜವಾದ 'ಒಡೆಯರು' ಕುರುಬರ ಮನಗೆ ಹುಡುಗಿ ಅವನ ಹೆಂಡತಿ ಒಡೇರಮ್ಮ ಆಗುತ್ತಾಳೆ.[೨] ಹೀಗೆ ದೀಕ್ಷೆಯ ಕಾರ್ಯ ಮುಗಿದ ಮೇಲೆ ಮುಂದೆ ನಡೆಯುವ ಮದುವೆಯ ಕಾರ್ಯವೆಲ್ಲ ಸಾಮಾನ್ಯವಾಗಿ ಇತರ ಕುರುಬರ ಮದುವೆಗಳಂತಯೇ ನಡೆಯುತ್ತದೆ. ಆದರೆ ಮದುವೆಯಲ್ಲಿ ನೂಲು ಸುತ್ತುವ, ವಧು-ವರರಿಗೆ ಅರಿಶಿಣ ಹಚ್ಚಿ, ಬಟ್ಟೆ ತೊಡಿಸುವ ಚಾಜಗಳನ್ನು ಒಡೆಯರ ಹೆಣ್ಣುಮಕ್ಕಳು ಮಾಡುತ್ತಾರೆಯೇ ಹೊರತು ಕುರುಬರ ಹೆಣ್ಣುಮಕ್ಕಳಿಗೆ ಅಲ್ಲಿ ಅವಕಾಶವಿರುವುದಿಲ್ಲ. "ಕೊಟ್ಟ ಹೆಣ್ಣು

ಕುಲಕ್ಕೆ ಹೊರಗು" ಎಂಬ ಗಾದೆಯ ಮಾತಿನಂತೆ ಕುರುಬರ ಮನೆಯ ಹುಡುಗಿ ಒಡೆಯರಮ್ಮನಾಗಿ ಒಡೆಯರ ಜಾತಿಯವಳಾಗಿ ಪರಿವರ್ತನೆ ಆಗುತ್ತಾಳೆ. ಆ ಸಂದರ್ಭದಿಂದ ಆಕೆ ಒಡೆಯರಗಿದ್ದ ಹಕ್ಕುಗಳಿಗೆ ಸಮಾನನಾಗುತ್ತಾಳೆ. ಮಹಿಳಾ ಜನಪದ ಸಂಸ್ಕೃತಿಯಲ್ಲಿ ಈ ವಿಧಾನ ಭಿನ್ನವಾದುದು. ಇದು ಶಿಷ್ಯತ್ವ(ಒಕ್ಕಲು ಮಕ್ಕಳು)ದ ಪರಿಕಲ್ಪನೆಯನ್ನು ನೆನಪಿಸುತ್ತದೆ.

ಒಡೆಯರ ಹುಡುಗನನ್ನು ಕೈಹಿಡಿದು ಒಡೇರಮ್ಮನಾದ ಕುರುಬರ ಹುಡುಗಿಯು ಅಂದಿನಿಂದ ಕಟ್ಟಾ ಸಸ್ಯಾಹಾರಿಯಾಗುತ್ತಾಳೆ. ಇದು ಈಕೆ ತನ್ನ ಆಹಾರ ಸಂಸ್ಕೃತಿಯಲ್ಲಿ ಮಾಡಿಕೊಳ್ಳುವ ಬದಲಾವಣೆ. ತಾನು ಹುಟ್ಟಿ ಬೆಳೆದ ಮನೆಯ ಆಹಾರದ ಪದ್ಧತಿಯನ್ನು ಕೈಬಿಡುವುದು ಮತ್ತು ಆ ವಾತಾವರಣಕ್ಕೆ ಹೊಂದಿಕೊಳ್ಳುವುದು ಮಹಿಳೆಯರಲ್ಲಿ ತಳಮಳವನ್ನುಂಟು ಮಾಡುತ್ತದೆ. ಇದಕ್ಕೆ ಅತಿಬೇಗನೆ ಹೊಂದಿ ಕೊಂಡ ಮತ್ತು ಹೊಂದಿಕೊಳ್ಳದೇ ಇರುವ ಹುಡುಗಿಯರ ಉದಾಹರಣೆಗಳು ಸಿಗುತ್ತವೆ. ಅಷ್ಟೆ ಅಲ್ಲದೇ ಸಮಾಜದ ದೃಷ್ಟಿಯಲ್ಲಿಯೂ ಅವಳ ಸ್ಥಾನ ಮೇಲಕ್ಕೇರುತ್ತದೆ. ದೀಕ್ಷೆಯಾದ ದಿನವೇ ಅವಳ ತಂದೆ-ತಾಯಿಯರು ಅವಳಿಗೆ ಬಾಗಿ ನಮಸ್ಕರಿಸುತ್ತಾರೆ. ಅಂದಿನಿಂದ ಅವಳು ತನ್ನ ಕುರುಬ ಬಂಧುಗಳಿಗೆ ಕೊನೆಗೆ ತನ್ನ ತಂದೆ-ತಾಯಿಯರಿಗೂ ನಮಸ್ಕರಿಸುವಂತಿಲ್ಲ. ಅವಳು ತನ್ನ ಗಂಡನ ಮನೆಯಿಂದ ತವರು ಮನೆಗೆ ಹೋದರೆ ಅಲ್ಲಿ ಮನೆಯನ್ನು ಶುದ್ಧಿ ಮಾಡಿ ಅವಳಿಗಾಗಿ ಪ್ರತ್ಯೇಕ ಅಡುಗೆಯನ್ನು ಮಾಡುತ್ತಾರೆ. ಅವಳಿಗಾಗಿ ಪ್ರತ್ಯೇಕ ವಸತಿ ವ್ಯವಸ್ಥೆಯನ್ನು ಮಾಡುತ್ತಾರೆ. ಹಾಗೆಯೇ ತವರು ಮನೆಯವರು ತಮ್ಮ ಮಗಳು ಮನೆಗೆ ಬಂದರೆ ಅವಳು ತಂದೆ-ತಾಯಿಯರು ಊಟ ಮಾಡಿದ ತಟ್ಟೆ ಇತ್ಯಾದಿಗಳನ್ನು ತೊಳೆಯು ವಂತೆ ಇಲ್ಲ. ಮನೆಯ ಹೊರಗಡೆಯೇ ಅವರಿಗೆ ಊಟದ ವ್ಯವಸ್ಥೆ ಇರುತ್ತದೆ. ಒಡೇರಮ್ಮ ತನ್ನ ಗಂಡನಂತೆಯೇ ಸದಾ ಹಣೆಯ ಮೇಲೆ ಮೂರು ಬೆರಳು ವಿಭೂತಿ, ಎದೆಯ ಮೇಲೆ ಲಿಂಗವನ್ನು ಧರಿಸಿ ಕೊಂಡಿರುತ್ತಾಳೆ. ಇದು ಅವಳನ್ನು ಇತರ ಕುರುಬರ ಹೆಣ್ಣು ಮಕ್ಕಳಿಂದ ಪ್ರತ್ಯೇಕಿಸಿ ತೋರಿಸುತ್ತದೆ. ತಾನು ಬೆಳೆದ ವಾತಾವರಣದಿಂದ ತನ್ನನ್ನು ತಾನು ಬೇರೆ ಪರಿಸರಕ್ಕೆ ರೂಪಿಸಿಕೊಳ್ಳುವ ವಿಧಾನಗಳು ಗಮನ ಸೆಳೆಯುತ್ತವೆ.

ಒಡೆಯರುಗಳು ತಮ್ಮ ಮನೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳಿಗೆ ಲಿಂಗದೀಕ್ಷೆಯನ್ನು ಮಾಡುವು ದಿಲ್ಲ. ಏಕೆಂದರೆ ಮುಂದೆ ಅವಳು ಕುರುಬರ ಮನೆಯ ಸೊಸೆಯಾಗಿ ಹೋಗುತ್ತಾಳೆ. ಆ ಕಾರಣಕ್ಕೆ ಅವಳಿಗೆ ಲಿಂಗದೀಕ್ಷೆ ಇಲ್ಲ. ಅವಳ ಮದುವೆಯು ಕುರುಬರ ಮದುವೆಯಂತೆಯೇ ನಡೆಯುತ್ತದೆ. ಹೀಗೆ ಕುರುಬರ ಮನೆಯ ಸೊಸೆಯಾಗಿ ಬಂದ ಒಡೆಯರ ಹುಡುಗಿ ಕುರುಬರ ಮನೆಯ ಪದ್ಧತಿಯಂತೆ ಮಾಂಸಹಾರವನ್ನು ಸ್ವೀಕರಿಸಬಹುದು. ಆದರೆ ಆ ಮುಂದೆಯೂ ಅವಳು ಸಸ್ಯಾಹಾರಿಯಾಗಿಯೇ ಮುಂದುವರಿಯುತ್ತಾಳೆ. ಕೆಲವರು ಮಾಂಸಾಹಾರಿ ಆಗುತ್ತಾರೆ. ಆದರೆ ಪ್ರಮಾಣ ಕಡಿಮೆ. ಇದಕ್ಕೆ ಆಕೆ ಬೆಳೆದ ವಾತಾವರಣ ಪ್ರಮುಖ ಕಾರಣ. ಹೀಗೆ ಒಡೆಯರ ಮನೆಯಿಂದ ಕನ್ಯೆಯನ್ನು ತೆಗೆದುಕೊಂಡ ಕುರುಬರ ಎಷ್ಟೋ ಕುಟುಂಬಗಳು ಸಸ್ಯಾಹಾರಿಗಳಾಗಿ ಪರಿವರ್ತನೆಯಾಗಿದ್ದು ಕಂಡುಬರುತ್ತದೆ. ಉದಾ:- ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮದಲ್ಲಿಯ ಕುರುಬರು ಒಡೆಯರುಗಳೊಂದಿಗೆ ರಕ್ತಸಂಬಂಧ ವನ್ನು ಮಾಡುತ್ತಿರುವುದರಿಂದ ಅಲ್ಲಿಯ ಯಾವ ಕುರುಬರೂ ಮಾಂಸಾಹಾರವನ್ನು ಸೇವಿಸುವುದಿಲ್ಲ. ಇದಕ್ಕೆ ಈ ಒಂದೇ ಕಾರಣವು ಅಲ್ಲ. ಆದರೆ ಪ್ರಮುಖ ಕಾರಣವಾಗಿರುವಂತೆ ಕಾಣಿಸುತ್ತದೆ.

## ೪.೨. ಶವಸಂಸ್ಕಾರ ಆಚರಣೆಗಳು

ಹುಟ್ಟು ಮನುಷ್ಯನ ಬದುಕಿನ ಆರಂಭವಾದರೆ ಸಾವು ಅದರ ಅಂತ್ಯವೆಂದು ಹೇಳಬಹುದು. ಹುಟ್ಟಿನ ಸಂದರ್ಭದಲ್ಲಿಯಂತೆ ಸಾವಿನ ಸಂದರ್ಭದಲ್ಲಿಯೂ ಕೆಲವೊಂದು ವಿಧಿ-ವಿಧಾನಗಳನ್ನು ಆಚರಿಸಿ ಕೊಂಡು ಬಂದಿರುವುದು ಕಂಡುಬರುತ್ತದೆ. ಇದಕ್ಕೆ ಒಡೆಯರ ಜನಾಂಗವೂ ಹೊರತಾಗಿಲ್ಲ. ಒಡೆಯರುಗಳು ಅಥವಾ ಒಡೇರಮ್ಮಗಳು ನಿಧನರಾದಾಗ ನಡೆಸುವ ಕಳೇಬರದ ಮೆರವಣಿಗೆ ಮತ್ತು ಅಂತ್ಯ ಸಂಸ್ಕಾರದ ವಿಧಿ-ವಿಧಾನಗಳು ತುಂಬಾ ಭಿನ್ನವಾದವು. ಇವುಗಳನ್ನು ನೋಡಿಯೇ ಅನುಭವಿಸಬೇಕು. ಇಲ್ಲಿ ಶವವನ್ನು ಕೂಡಿಸುವ ವಿಧಾನ ಲಿಂಗಾಯತ ಸಂಸ್ಕೃತಿಯನ್ನು ನೆನಪಿಸುತ್ತದೆ. ಕುರುಬರಲ್ಲಿ ಈ ವಿಧಾನ ಇಲ್ಲ. ಲಿಂಗಾಯತ ಸಂಸ್ಕೃತಿಗೆ ಸಂಸ್ಕೃತೀಕರಣಗೊಂಡವರಲ್ಲಿ ಅಲ್ಪಸ್ವಲ್ಪ ಕಾಣಿಸುತ್ತದೆ. ಆದರೆ ಪ್ರಮುಖವಾಗಿ ಕಾಣಿಸುವುದಿಲ್ಲ.

ಒಡೆಯರಯ್ಯ ಅಥವಾ ಒಡೇರಮ್ಮ ನಿಧನರಾದರೆ ಶವವನ್ನು ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ತೊಡಿಸಿ ಲಿಂಗ ಪೂಜಾ ಭಂಗಿಯಲ್ಲಿ ಗೋಡೆಗೆ ಒರಗಿಸಿ ಕೂಡಿಸುತ್ತಾರೆ. ಶವದ ಹಣೆಗೆ, ಕೊರಳಿಗೆ, ಭುಜ, ರಟ್ಟೆ, ಮುಂಗೈ, ಮುಂಗಾಲುಗಳಿಗೆ ಮೂರು ಬೆರಳಿನಿಂದ ಧವಳ ಬಣ್ಣದ ವಿಭೂತಿಯನ್ನು ಹಚ್ಚಿ ಹಣೆಗೆ ಗಂಧವನ್ನು ಇಡುತ್ತಾರೆ. ಬಿಲ್ವಪತ್ರಿ, ತುಂಬೆಪತ್ರಿ, ಲಕ್ಕಿಪತ್ರಿಯನ್ನು ಹೇರಳವಾಗಿ ಇಟ್ಟಿರುತ್ತಾರೆ. ಮರುಗ, ಮಲ್ಲಿಗೆ, ಸೇವಂತಿಗೆ ಹೂವುಗಳಿಂದ ಕಳೇಬರವನ್ನು ಅಲಂಕರಿಸುತ್ತಾರೆ. ದೀಪಾರತಿಯನ್ನು ಹಚ್ಚಿ, ಧೂಪಾರತಿಯಿಂದ ಮನೆಯಲ್ಲಿ ಲೋಬಾನದ ಹೊಗೆಯನ್ನು ಹಾಕಿರುತ್ತಾರೆ. ನಂತರ ಎಲ್ಲ ಬಳಗದವರು, ಹಿರಿಯರು ಸೇರಿದ ನಂತರ ಕಳೇಬರವನ್ನು ರೇವಣ್ಣಸ್ವಾಮಿಯ ಗುಡಿಗೆ ತರುತ್ತಾರೆ. ಗರ್ಭಗುಡಿಯಲ್ಲಿ ಶೋಭಿಸುವ ಶಿವ ಸ್ವರೂಪಿ ರೇವಣ್ಣಸ್ವಾಮಿಯ ಎದುರುಗಡೆಗೆ ಪ್ರಾಂಗಣದಲ್ಲಿ ಇಡುತ್ತಾರೆ. ಆಗ ಮಠದ ಒಡೆಯರು ಲಿಂಗೈಕ್ಯ ಗುರುವಿಗೆ ಅಥವಾ ಗುರುತಾಯಿಗೆ (ಒಡೇರಮ್ಮ) ಹಣೆಗೆ ವಿಭೂತಿ ಗಂಧವನ್ನು ಹಚ್ಚಿ ಧೂಪಾರತಿಯಿಂದ ಪೂಜೆಯನ್ನು ಮಾಡುತ್ತಾರೆ ಹಲಗೆ, ಡೊಳ್ಳು, ಕರಡೆ, ಚಮ್ಮೇಳ ಮುಂತಾದ ಮಂಗಳವಾದ್ಯಗಳು ಮೊಳಗುತ್ತಿರುವಾಗ ಗುರುವಿನ ಲಿಂಗದೀಕ್ಷೆಯನ್ನು ಸಡಿಲಿಸುವ ಕಾರ್ಯವು ವಿಧಿವತ್ತಾಗಿ ನಡೆಯುತ್ತದೆ. ಅಷ್ಟೋತ್ತಿಗಾಗಲೇ ಭಕ್ತರು ಸಿದ್ಧಪಡಿಸಿರುವ ಅಲಂಕೃತ ಹಸಿರು ಮಂಟಪದಲ್ಲಿ ಲಿಂಗೈಕ್ಯ ಗುರುವಿನ ಅಥವಾ ಗುರುಪತ್ನಿಯ ಕಳೇಬರವನ್ನು ಪದ್ಮಾಸನದಲ್ಲಿ ಕುಳ್ಳಿರಿಸುತ್ತಾರೆ. ಆಗ ಮಠದ ಒಡೆಯರುಗಳಿಂದ ಮತ್ತೊಮ್ಮೆ ಪೂಜೆ ನಡೆಯುತ್ತದೆ. ಮಂಗಳಾರತಿಯನ್ನು ಮಾಡಿ, ನೆರೆದ ಭಕ್ತ ಸಮೂಹ ತುಂಬೆ, ಬಿಲ್ವ, ಲಕ್ಕಿ, ಪತ್ರಿಗಳ ಸುರಿಮಳೆಯನ್ನುಗೈದು ತಮ್ಮ ನಮನಗಳನ್ನು ಸಲ್ಲಿಸುತ್ತಾರೆ. ನಂತರ ವಿಭೂತಿ ಧಾರಿಗಳಾದ ನಾಲ್ಕು ಜನ ಒಡೆಯರುಗಳು ಭಕ್ತವೃಂದದ ಜಯಕಾರದೊಂದಿಗೆ ಹೆಗಲಲ್ಲಿ ಹೊತ್ತುಕೊಂಡು ಮಠದ ಹೊಸ್ತಿಲನ್ನು ದಾಟಿಸುತ್ತಾರೆ. ಮಧ್ಯ ಮಧ್ಯ ಬೀರೇಶ್ವರನ ವೀರಮಕ್ಕಳು (ಈರಗಾರರು ಮತ್ತು ದಳವಾಯಿಗಳು) ಮಂಟಪಕ್ಕೆ ಹೆಗಲು ಕೊಟ್ಟುಕೊಂಡು ನಿಧಾನವಾಗಿ ಮಂಗಳವಾದ್ಯಗಳೊಂದಿಗೆ ಸಾಗುವ ದೃಶ್ಯವೂ ಅಂತಿಮಯಾತ್ರೆಯಂತೆ ಗೋಚರಿಸುತ್ತದೆ. ಹೀಗೆ ನಿಧಾನವಾಗಿ ಸಾಗುವ ಗುರುವಿನ ಉತ್ಸವವನ್ನು ಭಕ್ತರು ಕಣ್ತುಂಬ ನೋಡಿ ಕಡೆಯ ಗೌರವವನ್ನು ಸಲ್ಲಿಸುತ್ತಾರೆ. ಈ ರೀತಿ ನಿಧಾನವಾಗಿ ಸಾಗಿದ ಮೆರವಣಿಗೆಯ ಸಂಸ್ಕಾರ ವಿಧಿಯು ನಡೆಯಬೇಕಾಗಿದ್ದ

ಸ್ಥಳವನ್ನು ತಲುಪುತ್ತದೆ. ಅಷ್ಟೊತ್ತಿಗಾಗಲೇ ಭಕ್ತರು ಚೌಕಾಕಾರದ ನೆಲಮನೆಯನ್ನು ಸಿದ್ಧಪಡಿಸಿರುತ್ತಾರೆ. ಮಂಟಪವನ್ನು ಸಿದ್ಧಗೊಂಡಿರುವ ನೆಲಮನೆಯ ಮೇಲೆ ಇಳಿಸಿದ ನಂತರ ಮತ್ತೊಮ್ಮೆ ಮೂರನೆಯ ಮತ್ತು ಕೊನೆಯ ಪೂಜೆ ನೈವೇದ್ಯ ನಡೆಯುತ್ತದೆ. ನಂತರ ಗುರುಗಳು ವೀರಮಕ್ಕಳ ಸಹಾಯದಿಂದ ಲಿಂಗೈಕ್ಯ ಗುರುವಿನ ಶವವನ್ನು ನಿಧಾನವಾಗಿ ನೆಲಮನೆಗೆ ಇಳಿಸುತ್ತಾರೆ. ನೆಲಮನೆಯಲ್ಲಿ ಮಾಡಿರುವ ಗೂಡಿನಲ್ಲಿ ಪೂರ್ವಾಭಿಮುಖವಾಗಿ ಇಲ್ಲವೆ ಉತ್ತರಾಭಿಮುಖವಾಗಿ ಪದ್ಮಾಸನದ ಲಿಂಗಪೂಜಾ ಭಂಗಿಯಲ್ಲಿ ಕುಳ್ಳಿರಿಸುತ್ತಾರೆ. ನಂತರ ಗುರುವಿನ ಕೊರಳಲ್ಲಿರುವ ಲಿಂಗದ ಸೂತ್ರವನ್ನು (ದಾರ) ಬಿಚ್ಚುತ್ತಾರೆ. ಈ ಕ್ರಿಯೆಯನ್ನು 'ವಟ್ಟ ಅಳುಕಿಸುವುದು' ಎಂದು ಕರೆಯುತ್ತಾರೆ. ಹೀಗೆ ಸೂತ್ರವನ್ನು ತೆಗೆದು ಕೆಲವರು ಲಿಂಗವನ್ನು ಹಾಗೇ ಬಿಡುತ್ತಾರೆ. ಮತ್ತೆ ಕೆಲವರು ಭಾವಿ, ಕೆರೆ, ನದಿಯಲ್ಲಿ ಬಿಡುವುದೂ ಉಂಟು. ಕೆಲವರು ಸೂತ್ರ ಬಿಚ್ಚಿದ ಲಿಂಗವನ್ನು ಬಟ್ಟೆಯಲ್ಲಿ ಕಟ್ಟಿ ಶವದ ರಟ್ಟೆಗೆ ಕಟ್ಟುವುದೂ ಉಂಟು. ಹೀಗೆ ಒಡೆಯರುಗಳು ಮಡಿದ ಗುರುವಿನ ಪಟ್ಟವನ್ನು ಅಳುಕಿಸಿ ನಿಧಾನವಾಗಿ ಮೇಲೆ ಬರುತ್ತಾರೆ. ಭಕ್ತರು ನೂಕು ನುಗ್ಗಲಿನಲ್ಲಿ ಗುರುವಿನ ಮೇಲೆ ಅಥವಾ ಗುರುಪತ್ನಿಯ ಮೇಲೆ ವಿಭೂತಿ, ಬಿಲ್ವಪತ್ರಿ, ಲಕ್ಕಿಪತ್ರಿ, ತುಂಬೆಪತ್ರಿಯನ್ನು ಸುರಿಯುತ್ತಾರೆ. ಗುರುವಿನ ಕಾಯ ಸಂಪೂರ್ಣವಾಗಿ ವಿಭೂತಿ ಬಿಲ್ವದಳಗಳಿಂದ ಮುಚ್ಚಿ ಹೋಗುತ್ತದೆ. ಕೊನೆಯಲ್ಲಿ ಹಿರಿಯ ಒಡೆಯರು ಅಗಲವಾದ ಬಾಳೆಯ ಎಲೆಗಳಿಂದ ಶವವನ್ನು ಮುಚ್ಚಿ ಮೂರು ಬೊಗಸಿ ಮಣ್ಣನ್ನು ಹಾಕುತ್ತಾರೆ. ಆಮೆಲೆ ಮಠದ ಒಡೆಯರು, ಗೌಡರು, ಬಳಗ ಭಂಡಾರಿಗಳು, ಭಕ್ತವರ್ಗದವರು ಮಣ್ಣನ್ನು ಹಾಕಿ ಧನ್ಯತೆಯನ್ನು ಹೇಳುತ್ತಾರೆ. ಆಮೇಲೆ ವೀರಮಕ್ಕಳು ಶ್ರೀಗುರುವಿನ ಗದ್ದುಗೆಯನ್ನು ಚೌಕಾಕಾರವಾಗಿ ನಿರ್ಮಿಸಿ ಒಡೆಯರಿಂದ ಹಣೆಗೆ ವಿಭೂತಿಯನ್ನು ಹಚ್ಚಿಸಿಕೊಳ್ಳುತ್ತಾರೆ. ಇದು ದಕ್ಷಿಣ ಕರ್ನಾಟಕದ ಭಾಗದಲ್ಲಿ ಒಡೆಯರುಗಳನ್ನು ಸಂಸ್ಕರಿಸುವ ವಿಧಾನ.[೪] ಮೂರು ವರ್ಗದ ಗುರು ಒಡೆಯರಲ್ಲಿ ಈ ವಿಧಾನಗಳು ಭಿನ್ನ ಭಿನ್ನವಾಗಿವೆ.

ಸಾಮಾನ್ಯವಾಗಿ ಉತ್ತರ ಕರ್ನಾಟಕ ಭಾಗದಲ್ಲಿರುವ ಅಮೋಘಸಿದ್ಧ ಸಂಪ್ರದಾಯದ ಒಡೆಯರುಗಳನ್ನು ರೇವಣಸಿದ್ಧ ಸಂಪ್ರದಾಯದ ಒಡೆಯರುಗಳನ್ನು ಸಂಸ್ಕಾರ ಮಾಡುವ ವಿಧಾನವು ಇವೇ ಬಗೆಯಾಗಿ ಕಂಡು ಬರುತ್ತವೆ. ಆದರೆ ಸರೂರಿನ ಒಡೆಯರುಗಳು ತೀರಿಕೊಂಡಾಗ ಶವವನ್ನು ಮಂಟಪದಲ್ಲಿ ಕುಳ್ಳಿರಿಸಿಕೊಂಡು ಒಯ್ಯದೇ ಕಂಬಳಿಯ ಜಾಡಿಯಲ್ಲಿ ತೆಗೆದುಕೊಂಡು ಹೋಗುತ್ತಾರೆ. ಒಡೆಯರು (ಪುರುಷರು) ತೀರಿಕೊಂಡಾಗ ಬಿಳಿಯ ಕಂಬಳಿಯ ಚಾಳಿಯಲ್ಲಿಯೂ ಒಡೇರಮ್ಮಗಳು (ಸ್ತ್ರೀಯರು) ತೀರಿಕೊಂಡಾಗ ಅವರ ಶವವನ್ನು ಕರಿಯ ಕಂಬಳಿಯ ಜಾಡಿಯಲ್ಲಿ ಸಂಸ್ಕಾರಕ್ಕೆ ಒಯ್ಯುತ್ತಾರೆ. 'ಕರಿಕಂಬಳಿ' ಮತ್ತು 'ಬಿಳಿಕಂಬಳಿ' ಎಡಬಲ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಇಲ್ಲಿ ಪುರುಷನಿಗೆ ಮೊದಲ ಆದ್ಯತೆ. ಆ ಕಾರಣಕ್ಕೆ ಆತನಿಗೆ ಬಿಳಿಕಂಬಳಿಯನ್ನು ಬಳಸುತ್ತಾರೆ. ಹೆಣ್ಣು ಕರಿಕಂಬಳಿ ಬಳಕೆಯ ಮನೆತನದಿಂದ ಬಂದವಳು. ಆದ್ದರಿಂದ ಆಕೆಗೆ ಕರಿಕಂಬಳಿ ಬಳಸುತ್ತೇವೆ ಎಂದು ಕುಷ್ಟಗಿ ತಾಲೂಕು ಕೊರಡಕೇರೆ ಗ್ರಾಮದ ಅಮೋಘಸಿದ್ಧ ಗುರುವಿನ್‌ನವರು ಹೇಳುತ್ತಾರೆ. ಮೊದಲಿಗೆ ಇವರಲ್ಲಿಯೂ ಶವವನ್ನು ಅಲಂಕರಿಸಿದ ಮಂಟಪದಲ್ಲಿ ಪದ್ಮಾಸನದಲ್ಲಿ ಕುಳ್ಳಿರಿಸಿಕೊಂಡು ಹೋಗುವ ಪದ್ಧತಿಯು ಇದೆ. ಆ ಪದ್ಧತಿಯು ಆಗಿ ಬರದೇ ಇರುವುದರಿಂದ ಅದನ್ನು ಬಿಟ್ಟಿರುವುದಾಗಿ ಹೇಳುತ್ತಾರೆ.[೫] ಸಂಸ್ಕಾರ ವಿಧಿಗೆ

ಹೋದವರು ಮರಳಿ ಮನೆಗೆ ಬಂದು ಸ್ನಾನ ಮಾಡಿ ಮಡಿ ಬಟ್ಟೆಗಳನ್ನು ತೊಡುತ್ತಾರೆ. ಆದರೆ ಶ್ರೀ ಗುರು ಒಡೆಯರ ಸಂಸ್ಕಾರ ಕಾರ್ಯದಲ್ಲಿ ಭಾಗವಹಿಸಿ ಬಂದವರಿಗೆ ಇಂಥ ಮೈಲಿ ಸೂತಕ ಇಲ್ಲವೆಂಬುದು ಸಾಮಾನ್ಯವಾದ ನಂಬಿಕೆಯಾಗಿದೆ. ಈ ಕಾರಣಕ್ಕಾಗಿಯೂ ಇರಬೇಕು. "ಸತ್ತರೆ ಐನೋರಾಗೇ ಸಾಯಬೇಕು" ಎಂಬ ನಾಣ್ನುಡಿ ಹುಟ್ಟಿಕೊಂಡಿರುವುದು.

ಒಡೆಯರುಗಳನ್ನು ಸಂಸ್ಕರಿಸುವ ಸ್ಥಳದಲ್ಲಿ ಸಾಮಾನ್ಯವಾಗಿ ಇತರ ಜನಾಂಗದವರನ್ನು ಹುಗಿಯುವುದಿಲ್ಲ. ಒಡೆಯರುಗಳಿಗೆ ಅವರದ್ದೇ ಆದ ಪ್ರತ್ಯೇಕ ರುದ್ರಭೂಮಿ ಇರುತ್ತದೆ. ಅಲ್ಲಿ ಒಡೆಯರುಗಳ ಶವವನ್ನು ಮಾತ್ರ ಹೂಳುತ್ತಾರೆ. ಒಡೆಯರುಗಳನ್ನು ಸಮಾಧಿ ಮಾಡಿ ಅವರ ಸಮಾಧಿಯ ಮೇಲೆ ಚಿಕ್ಕ ಚಿಕ್ಕ ದೇವಾಲಯಗಳನ್ನು ಕಟ್ಟುವ ಪದ್ಧತಿ ಇದೆ. ಕರ್ನಾಟಕದಾದ್ಯಂತ ಹರಡಿಕೊಂಡಿರುವ ಒಡೆಯರ ನೆಲೆಗಳಲ್ಲಿ ಇಂಥ ವ್ಯವಸ್ಥೆ ಇರುವುದನ್ನು ಕಾಣಬಹುದಾಗಿದೆ. ಹೆಚ್ಚಾಗಿ ಈ ಸ್ಥಳಗಳು ರೇವಣಸಿದ್ಧ ದೇವಾಲಯಗಳ ಹತ್ತಿರ ಇರುತ್ತವೆ. ಒಡೆಯರ ಸಮಾಧಿಗಳ ಮೇಲೆ ಸಣ್ಣ ಸಣ್ಣ ಗುಡಿಗಳನ್ನು ಕಟ್ಟುವ ಪದ್ಧತಿ ಇವರಲ್ಲಿದೆ. ಪವಾಡ ಮಾಡಿದ ಒಡೆಯನಾದರೆ ಗುಡಿಗಳನ್ನು ತಪ್ಪದೆ ಕಟ್ಟುತ್ತಾರೆ. ರೇವಣಸಿದ್ಧನಂತೆ ಇವರನ್ನು ಆರಾಧಿಸುವ ವಿಧಾನಗಳು ಅಲ್ಲಲ್ಲಿ ಕಂಡುಬರುತ್ತವೆ. ಉದಾಹರಣೆಗೆ ಸರೂರು ಗ್ರಾಮದ ಏಳಗುಡಿ ದೇವಾಲಯದ ಹತ್ತಿರ ಇರುವ ಒಡೆಯರ ಸಮಾಧಿ ಗುಡಿಗಳನ್ನು ನೋಡಬಹುದು.

ಕುರುಬರ ಕುಲಗುರುಗಳಾದ ಒಡೆಯರದು ಒಂದು ಪ್ರತ್ಯೇಕವಾದ ಗುಂಪು. ಸಾಮಾಜಿಕವಾಗಿ ಹೆಚ್ಚಿನ ಸ್ಥಾನದಲ್ಲಿದ್ದರೂ ಕೂಡ ಅದು ಉತ್ತಮಿಕೆಯ ಪ್ರತ್ಯೇಕ ಜಾತಿಯ ಅಹಮ್ಮಿಕೆಗೆ ಮುಟ್ಟದಿರುವುದು ವಿಶೇಷ. ಏಕೆಂದರೆ ಒಡೆಯರುಗಳು ತಮ್ಮ ಹೆಣ್ಣನ್ನು ಕುರುಬರ ಮನೆಗೇ ಕೊಡಬೇಕು. ತಮ್ಮ ಮನೆಗೆ ಕುರುಬರ ಮನೆಯಿಂದಲೇ ಕನ್ಯೆಯನ್ನು ತಂದುಕೊಳ್ಳಬೇಕು. ಇದು ರೇವಣಸಿದ್ಧನ ಸಮ್ಮುಖದಲ್ಲಿ ಆದ ಒಪ್ಪಂದವೆಂದು ನಂಬಿದ್ದಾರೆ. ಹಾಗಾಗಿ ಕಟ್ಟಾ ನಿಯಮದಂತೆ ಪಾಲಿಸುತ್ತಾರೆ. ಇಲ್ಲಿ ಬರುವ ಆಹಾರದ ಸಮಸ್ಯೆಯನ್ನು ಒಡೆಯರುಗಳು ಪರಿಹರಿಸಿಕೊಂಡ ರೀತಿ ತುಂಬಾ ವಿನೂತನವಾದುದು. ಹೀಗೆ ಒಡೆಯರುಗಳು ಕುರುಬರ ಗುರುಗಳಾಗಿ, ಕುರುಬರಲ್ಲಿ ಒಂದು ಉಪಪಂಗಡವಾಗಿ ಪ್ರಾಚೀನ ಕಾಲದಿಂದಲೂ ತಮ್ಮ ಸಾಮಾಜಿಕ ವ್ಯವಸ್ಥೆಯನ್ನು ಆಚಾರ-ವಿಚಾರ-ನಂಬಿಕೆಗಳನ್ನು ಯಥಾವತ್ತಾಗಿ ಉಳಿಸಿಕೊಂಡು ಬಂದಿರುವುದು ಈಗಲೂ ಕಾಣಬಹುದು.

### ೪.೩. ಉತ್ಸವ - ಜಾತ್ರೆಗಳು

ಸಿದ್ಧರಾಮೇಶ್ವರ, ರೇವಣಸಿದ್ಧೇಶ್ವರ, ಅಮೋಘಸಿದ್ಧೇಶ್ವರರ ಅನುಯಾಯಿಗಳೂ ಅರ್ಚಕರೂ ಆಗಿರುವ ಒಡೆಯರುಗಳು ಈ ಮಹಾಪುರುಷರ ದೇವಾಲಯ ಅಥವಾ ಮಠಗಳು ಇರುವಲ್ಲಿ ಕಂಡು ಬರುತ್ತಾರೆ. ಈ ದೇವಾಲಯ ಅಥವಾ ಮಠದ ಅರ್ಚಕರು ಒಡೆಯರೆ ಆಗಿರುತ್ತಾರೆ. ಈ ದೇವರುಗಳ ಆರ್ಚಕರು, ಹಬ್ಬ, ಉತ್ಸವ, ಜಾತ್ರೆ ಮುಂತಾದವುಗಳನ್ನು ನಿಯಮಿತವಾಗಿ ನಡೆಸಿಕೊಂಡು ಬರುತ್ತಾರೆ. ಆ ಮೂಲಕ ತಮ್ಮ ದೈವಭಕ್ತಿಯನ್ನು ಧಾರ್ಮಿಕ ಶ್ರದ್ಧೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಹಾಗೆಯೇ ಕುರುಬರ ಕುಲಗುರುಗಳಾಗಿ ಕುರುಬ ಜನಾಂಗದ ಧಾರ್ಮಿಕ, ಸಾಮಾಜಿಕ ಪರಂಪರೆಗೆ ಒಂದು ಭದ್ರವಾದ ನೆಲೆಗಟ್ಟನ್ನು ಒದಗಿಸಿದ್ದಾರೆ. ಜೊತೆಗೆ ಈ ಜನಾಂಗದ ಸಂಪ್ರದಾಯಗಳನ್ನು ಯಥಾವತ್ತಾಗಿ ಕಾಪಾಡಿಕೊಂಡು ಬರುವಲ್ಲಿ ಇವರ ಪಾತ್ರ ತುಂಬಾ ದೊಡ್ಡದು ಎಂದು ಹೇಳಬಹುದು. ಕುರುಬ ಜನಾಂಗ ದವರ ಹುಟ್ಟಿನಿಂದ ಹಿಡಿದು ಸಾಯುವವರೆಗೆ ನಡೆಯುವ ಸೂತಕ ಪರಿಹಾರ, ನಾಮಕರಣ, ಗೃಹಪ್ರವೇಶ ಮದುವೆಯ ಮಂಗಲಕಾರ್ಯ, ಅಂತ್ಯಸಂಸ್ಕಾರ ಮುಂತಾದ ಕಾರ್ಯಗಳು ಇವರ ನೇತೃತ್ವದಲ್ಲಿಯೇ ನಡೆಯ ಬೇಕು. ಅಲ್ಲದೇ ಕುರುಬರ ಕುಲದೈವವಾದ ಬೀರದೇವರ ಪೂಜಾರಿಕೆಯ ಪಟ್ಟ, ಈರಗಾರಿಕೆಯ ಪಟ್ಟಗಳನ್ನು ಕಟ್ಟುವುದು, 'ದೀಕ್ಷೆ' ನೀಡುವವರು ಇವರೇ ಆಗಿದ್ದಾರೆ. ಒಂದರ್ಥದಲ್ಲಿ ಈ ಎಲ್ಲಾ ಆಚರಣೆಗಳಿಗೂ ಒಡೆಯರುಗಳೇ ಪ್ರಮುಖರಾಗಿದ್ದಾರೆ.

• **ದೇವತಾರಾಧನೆ, ಹಬ್ಬ ಉತ್ಸವ, ಜಾತ್ರೆಗಳು**

ಪ್ರತಿಯೊಂದು ಜನಾಂಗದವರು ತಮ್ಮದೇ ಆದ ದೇವತೆಯೊಂದನ್ನು ಸೃಷ್ಟಿಸಿಕೊಂಡು 'ಕುಲದೇವತೆ' ಯನ್ನಾಗಿ ಮಾಡಿಕೊಂಡು ಆರಾಧಿಸಿಕೊಂಡು ಬಂದಿರುತ್ತಾರೆ. ಇದಕ್ಕೆ ಕರ್ನಾಟಕದ ಪ್ರಾಚೀನ ಜನಾಂಗಗಳಲ್ಲಿ ಒಂದಾದ ಕುರುಬ ಜನಾಂಗವೂ ಹೊರತಾಗಿಲ್ಲ.[೬] ಬೀರೇಶ್ವರನನ್ನು ತಮ್ಮ ಕುಲದೇವರನ್ನಾಗಿ ಮಾಡಿಕೊಂಡು ಅತ್ಯಂತ ಶ್ರದ್ಧೆ, ಭಕ್ತಿಗಳಿಂದ ಆದಿಕಾಲದಿಂದಲೂ ಆರಾಧಿಸಿಕೊಂಡು ಬಂದಿದ್ದಾರೆ. ಸಿದ್ಧಪುರುಷರಾದ ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ಅಮೋಘಸಿದ್ಧೇಶ್ವರರ ಅನುಯಾಯಿಗಳೂ ಅರ್ಚಕರೂ ಒಡೆಯರು ಗಳೇ ಆಗಿದ್ದಾರೆ ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಈ ಮೂವರು ಮಹಾಪುರುಷರನ್ನು ಅನುಸರಿಸಿ ಕೊಂಡು ಒಡೆಯರುಗಳಲ್ಲಿ ಮೂರು ಸಂಪ್ರದಾಯಗಳಿರುವುದು ಕಂಡು ಬರುತ್ತದೆ.

ರೇವಣಸಿದ್ಧೇಶ್ವರ ಸರವೂರು ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆಯನ್ನು ನೀಡಿ ಕುರುಬ ಕುಲಕ್ಕೆ ಒಡೆಯನನ್ನಾಗಿ ಮಾಡಿದರು. ಇದಕ್ಕೆ ಭೀಮಕವಿಯ 'ಹಾಲುಮತೋತ್ತೇಜಕ ಪುರಾಣ', 'ತಗರ ಪವಾಡ', ಒಡೆಯರುಗಳಲ್ಲಿ ದೊರೆಯುವ ದಾಖಲೆಗಳು ಆಧಾರವನ್ನು ಒದಗಿಸುತ್ತವೆ. ಹೀಗೆ ರೇವಣಸಿದ್ಧೇಶ್ವರರು ಸರವೂರು ಶಾಂತಮುತ್ತಯ್ಯನ ಮೂಲಕ ಹುಟ್ಟು ಹಾಕಿರುವ ಈ ಗುರು ಪರಂಪರೆಯನ್ನು ಶಾಂತ ಮುತ್ತಯ್ಯನ ನಂತರ ಅವನ ಸಂತತಿಯವರು ಮುಂದುವರಿಸಿಕೊಂಡು ಬಂದಿರುವುದರಿಂದ ಅವರನ್ನು 'ಶಾಂತವೊಡೆಯರು, ಶಾಂತಭಿಕ್ಷಾವರ್ತಿಗಳು' ಎಂದು ಕರೆಯುತ್ತಾರೆ. ಈ ಶಾಂತವೊಡೆಯರುಗಳಿಗೆ ದೀಕ್ಷೆ ಮತ್ತು ಮೋಕ್ಷಗಳನ್ನು ಕರುಣಿಸಿದ ಶಿವಸ್ವರೂಪಿ ರೇವಣಸಿದ್ಧರು ಗುರು ಮತ್ತು ಆರಾಧ್ಯ ದೈವವಾಗಿದ್ದಾರೆ. ಹೀಗಾಗಿ ರೇವಣಸಿದ್ಧೇಶ್ವರ ದೇವಾಲಯಗಳು ಮತ್ತು ಮಠಗಳು ಎಲ್ಲಿ ಇರುತ್ತವೆಯೋ ಅಲ್ಲಿ ಈ ಶಾಂತವೊಡೆಯರು ಅವುಗಳ ಅರ್ಚಕರಾಗಿ, ಪೀಠಾಧಿಪತಿಗಳಾಗಿ ಕಾರ್ಯನಿರ್ವಹಿಸುತ್ತಾರೆ. ಜೊತೆಗೆ ಆ ಸುತ್ತಮುತ್ತಲಿನ ಪ್ರದೇಶದ ಕುರುಬ ಜನಾಂಗದವರ ಕುಲಗುರುಗಳಾಗಿ ಅವರ ಸಕಲ ಸಾಮಾಜಿಕ, ಧಾರ್ಮಿಕ ಕಾರ್ಯಗಳ ನೇತೃತ್ವವಹಿಸಿರುತ್ತಾರೆ. ರೇವಣಸಿದ್ಧೇಶ್ವರರ ಪೂಜೆ ಆರಾಧನೆ ಇತ್ಯಾದಿಗಳ ಒಡೆತನ ಇವರಿಗೇ ಇರುವುದು. ಇವರು ಇಲ್ಲದ ಕಡೆಗಳಲ್ಲಿ ಕುರುಬರ ಒಪ್ಪಿಗೆಯಂತೆ ಬೇರೆಯವರು ಶ್ರೀರೇವಣಸಿದ್ಧೇಶ್ವರ ಪೂಜೆ ಇತ್ಯಾದಿಗಳ ಕಾರ್ಯವನ್ನು ನಿರ್ವಹಿಸಿಕೊಂಡು ಹೋಗುತ್ತಾರೆ.

ಉದಾಹರಣೆಗೆ:- ಬಿಜಾಪುರ ಜಿಲ್ಲೆಯ ಹೊರ್ತಿ ಮತ್ತು ಇಂಗಳೇಶ್ವರದಲ್ಲಿರುವ ರೇವಣಸಿದ್ಧೇಶ್ವರ ಪೂಜೆಯನ್ನು ಲಿಂಗಾಯತರು ಮಾಡಿಕೊಂಡು ಬರುತ್ತಿರುವುದು ಕಂಡು ಬರುತ್ತದೆ. ಇಂತಹ ಕೆಲವು ಉದಾಹರಣೆಗಳನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಕುರುಬ ಒಡೆಯರುಗಳೇ ರೇವಣಸಿದ್ಧೇಶ್ವರ ಪೂಜೆ ಇತ್ಯಾದಿಗಳ ಒಡೆತನವನ್ನು ಹೊಂದಿರುವುದು ಸರ್ವೇಸಾಮಾನ್ಯವಾಗಿ ಕಂಡು ಬರುವ ಸಂಗತಿಯಾಗಿದೆ.

ಕುರುಬ ಜನಾಂಗದವರು ಇರುವೆಡೆಗಳಲ್ಲಿ ರೇವಣಸಿದ್ಧೇಶ್ವರ ದೇವಾಲಯ, ಮಠಗಳು ಇರುವುದು ಸಾಮಾನ್ಯ. ಅದನ್ನು ಈ ಕೆಳಗಿನ ಜನಪದ ಹಾಡು ಸ್ಪಷ್ಟಪಡಿಸುತ್ತದೆ.

"ನಾಗಾಳೊನ್ನೀಗೆ ಆದಾವು ಗುರುಮಠ
ನ್ಯಾಯಗಾರರು ಕುರುಬರು
ನ್ಯಾಯಗಾರರು ಕುರುಬರ ಕೇರ್‍ಯಾಗೆ
ಆದಾವು ರೇವಣ್ಣರ ಗುರುಮಠ".[೬]

ಹೀಗೆ ಕುರುಬರ ಕೇರಿಗಳಲ್ಲಿ ಇರುವ ರೇವಣ್ಣಸ್ವಾಮಿಯ ಮೇಲೆ ಕುರುಬರಿಗೂ ಮತ್ತು ಒಡೆಯರು ಗಳಿಗೂ ಎಲ್ಲಿಲ್ಲದ ಭಕ್ತಿ, ಶ್ರದ್ಧೆ. ಈ ದೈವದ ಮೇಲೆ ಅವರಿಗಿರುವ ಹಂಬಲ ಹೃದಯ ತುಡಿತವನ್ನು ಜನಪದರು ಹೀಗೆ ಹೇಳಿಕೊಂಡಿದ್ದಾರೆ. ಇಂಥ ಅನನ್ಯವಾದ ಭಕ್ತಿಭಾವವನ್ನು ಪ್ರತಿನಿತ್ಯ ನಿಯಮಿತವಾಗಿ ಮಾಡುವ ಪೂಜೆ, ಹಬ್ಬ ಹರಿದಿನಗಳಲ್ಲಿ ಏರ್ಪಡಿಸುವ ಜಾತ್ರೆ ಉತ್ಸವಗಳ ಮೂಲಕ ಸಂತೃಪ್ತಿಗೊಳಿಸಿ ಕೊಳ್ಳುತ್ತಾರೆ. ರೇವಣ್ಣಸ್ವಾಮಿಯ ಪೂಜೆಯನ್ನು ರೇವಣಸಿದ್ಧ ಮಠಗಳಲ್ಲಿ ಪ್ರತಿನಿತ್ಯ ಎರಡು ಬಾರಿ ಮಾಡುತ್ತಿರುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ಕೆಲವು ಕಡೆ ದಿನಕ್ಕೆ ಮೂರು ಬಾರಿ ಪೂಜೆ ನಡೆಯುತ್ತದೆ. ಮತ್ತೆ ಕೆಲವು ಕಡೆ ವಾರಕ್ಕೆ ಒಂದು ಬಾರಿ ಪೂಜೆ ನಡೆಯುತ್ತದೆ. ಹೆಚ್ಚಾಗಿ ಭಾನುವಾರ ಇಲ್ಲವೇ ಸೋಮವಾರ ವಾರದ ಪೂಜೆ ನಡೆಯುವುದು ಹೆಚ್ಚು ರೂಢಿಯದಲ್ಲಿದೆ. ಉದಾಹರಣೆಗೆ 'ಶಿರಾ'ದ ರೇವಣಸಿದ್ಧ ಮಠದ ಪೂಜೆ. ಇವು ಒಡೆಯರ ವ್ಯವಸ್ಥೆಗೆ ರೂಢಿಸಿಕೊಂಡ ವಿಧಾನಗಳು. ಆದರೆ ದಿನಕ್ಕೆ ಎರಡು ಬಾರಿ ನಡೆಯುವುದು ಹೆಚ್ಚು ಮತ್ತು ಪಾರಂಪರಿಕ ಪದ್ಧತಿ. ಈ ಪದ್ಧತಿ ಅಥಣಿ, ಗೋಕಾಕ್, ಹಾರೊಗೇರಿ ಪ್ರದೇಶಗಳ ಬೀರಪ್ಪ ದೇವಾಲಯದಲ್ಲಿ ನಡೆಯುತ್ತದೆ. ಪೂಜೆ ಮಾಡುವ ಸಂದರ್ಭ ಗಮನ ಸೆಳೆಯುತ್ತದೆ. ಪೂಜೆಯನ್ನು ಮಾಡಲು ನಿಯುಕ್ತರಾದ ಒಡೆಯರುಗಳು ಪ್ರತಿನಿತ್ಯ ತಣ್ಣೀರ ಮಿಂದು ಬಣ್ಣ ಕಳೆಮುಟ್ಟು ಚಿನ್ನದ ಗಿಂಡಿ ಬಲಗೈಲಿ ಹಿಡಿದು ಸ್ವಾಮಿಯ ಪೂಜೆಗೆ ನಡೆಯುತ್ತಾರೆ. ಹೀಗೆ ಪೂಜೆಗೆ ಹೋಗುವ ಒಡೆಯರುಗಳು "ಬಣ್ಣದ ಜೋತುರವ ಗಣ್ಣೀಲೆತಿರವೊತೆ ತುಂಬೆಪೊಪ್ಪಿಗೋಗಿ ಬರುವಾಗ" ಶಿಷ್ಯರು ಅವರಿಗೆ ಪಾಮರ ಬೀಸುತ್ತಾರೆ.[೭] ಇದು ಕುರುಬರಿಗೆ ತಮ್ಮ ಗುರುವಾದ ರೇವಣ್ಣ ಸ್ವಾಮಿಯಲ್ಲಿ ಮತ್ತು ಒಡೆಯರುಗಳಲ್ಲಿರುವ ಒಂದು ರೀತಿಯ ಭಕ್ತಿಯ ಪರಾಕಾಷ್ಠೆ ಎಂದು ಹೇಳಬಹುದು. ಇದು ಈ ದೈವಗಳಿಗೆ ಇದೇ ರಾಜ ಮಾರ್ಯಾದೆಯನ್ನು ನೆನಪಿಸುತ್ತದೆ. ಹೀಗೆ ಬಂದ ಒಡೆಯರುಗಳು ಸ್ವಾಮಿಯ ಹಿಂದಿನ ಪೂಜೆಯನ್ನು ಕಳೆದು ತೆಗೆದು ಪರಿಶುದ್ಧ ಜಲದಿಂದ ಸ್ವಾಮಿಗೆ ಮಜ್ಜನವನ್ನು ಮಾಡಿಸಿ ವಿಭೂತಿ ಗಂಧವನ್ನು ಹಚ್ಚಿ ಹೂವು ಪತ್ರಿಯನ್ನು ಏರಿಸಿ, ದೀಪ ಧೂಪಾರತಿಯನ್ನು ಬೆಳಗಿ

ನೈವೇದ್ಯವನ್ನು ಅರ್ಪಿಸುತ್ತಾರೆ. ಈ ಒಡೆಯರುಗಳು ರೇವಣ್ಣಸ್ವಾಮಿಗೆ ಮಾಡುವ ಪೂಜಾ ಕ್ರಮವು ಒಂದು ರೀತಿಯಲ್ಲಿ ಭಕ್ತ ಕವಿ ಹರಿಹರನ್ನು ಪಂಪಾವಿರೂಪಾಕ್ಷನಿಗೆ ಮಾಡುವ ಪೂಜಾ ಕ್ರಮವನ್ನು ಹೋಲುತ್ತದೆ. ಹೀಗೆ ಪ್ರತಿನಿತ್ಯ ನಿಯಮಿತವಾಗಿ ಪೂಜೆಯನ್ನು ಮಾಡುವುದರ ಜೊತೆಗೆ ಹಬ್ಬಹರಿದಿನಗಳಲ್ಲಿ ರೇವಣ್ಣಸ್ವಾಮಿಯ ಪಲ್ಲಕ್ಕಿ ಉತ್ಸವ-ಜಾತ್ರೆಗಳನ್ನು ಏರ್ಪಡಿಸುತ್ತಿರುವುದು ಕಂಡು ಬರುತ್ತದೆ. ವಿಶೇಷವಾಗಿ ದಸರಾ ಹಬ್ಬದ ಸಂದರ್ಭದಲ್ಲಿ ರೇವಣ್ಣಸ್ವಾಮಿಯ ಪಲ್ಲಕ್ಕಿ ಉತ್ಸವಗಳೂ ಮಹಾಶಿವರಾತ್ರಿಯ ಸಂದರ್ಭದಲ್ಲಿ ರೇವಣ್ಣಸ್ವಾಮಿಯ ಜಾತ್ರೆಗಳು ನಡೆಯುತ್ತಿರುವುದು ಕಂಡು ಬರುತ್ತದೆ. ಮಹಾಶಿವರಾತ್ರಿಯ ಸಂದರ್ಭದಲ್ಲಿ ನಡೆಯುವ ರೇವಣ್ಣಸಿದ್ಧೇಶ್ವರ ಜಾತ್ರೆಗಳಲ್ಲಿ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು, ಗುಲಬರ್ಗಾ ಜಿಲ್ಲೆಯ ಶಹಪುರ ತಾಲೂಕಿನ ಶಿರವಾಳ ಗ್ರಾಮದ ಜಾತ್ರೆಗಳು ಪ್ರಸಿದ್ಧವಾಗಿವೆ. ಈ ಜಾತ್ರೆಗಳಲ್ಲಿ ಅಪಾರ ಸಂಖ್ಯೆ ಕುರುಬ ಜನಾಂಗದವರು ಭಾಗವಹಿಸಿ ತಮ್ಮ ಶ್ರದ್ಧೆ - ಭಕ್ತಿಯನ್ನು ತೋರ್ಪಡಿಸಿಕೊಳ್ಳುತ್ತಾರೆ. ಅದೂ ಅಲ್ಲದೆ ರೇವಣಸ್ವಾಮಿಗೆ ಕುರುಬರು ಮಾಡುವ ಕಂಥೆ ಸೇವೆಯು ಒಂದು ವಿಶಿಷ್ಟ ಆಚರಣೆಯಾಗಿದೆ. ಈ ಆಚರಣೆ ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿ ಇಲ್ಲ. ಆದರೆ ಡೊಳ್ಳಿನ ಹಾಡುಗಳಲ್ಲಿ (ಈ ಪ್ರದೇಶದಲ್ಲಿ ಹಾಡುವ) ಈ ಆಚರಣೆಯ ವಿವರಗಳು ಬರುತ್ತವೆ. ಈ ಆಚರಣೆ ವಿಸ್ಮೃತಿ ಆಗಿರುವುದರ ಬಗ್ಗೆ ಮಾಹಿತಿಗಳು ಸಿಗುವುದಿಲ್ಲ. ದಕ್ಷಿಣ ಕರ್ನಾಟಕದಲ್ಲಿ ಪ್ರಚಲಿತದಲ್ಲಿದೆ. ಆ ಆಚರಣೆಯ ವಿವರವನ್ನು ಕೆಳಗೆ ವಿಶ್ಲೇಷಿಸಲಾಗಿದೆ.

### ೪.೩.೧. ಕಂಥಾಧಾರಣ ಸೇವೆ

ಕುರುಬರ ಧಾರ್ಮಿಕ ಆಚರಣೆಗಳಲ್ಲಿ ಬಹುಮುಖ್ಯವಾದುದು ಮತ್ತು ಅಷ್ಟೇ ವಿಶಿಷ್ಟವಾದುದು 'ಕಂಥೆಸೇವೆ'ಯ ಆಚರಣೆ. ಅಂದರೆ ತಮ್ಮ ಕುಲದೈವಗಳಿಗೆ ಕಂಥೆಯನ್ನು ಅರ್ಪಿಸುವ ಆಚರಣೆ. ಇದು ಕುರುಬರ ಎಲ್ಲಾ ದೈವಗಳಿಗೆ ಆಚರಣೆಯಾಗಿ ನಡೆಯುತ್ತಿಲ್ಲ. ಕೇವಲ ರೇವಣಸಿದ್ಧ, ಸಿದ್ಧರಾಮ ಮತ್ತು ಇಟ್ಟಪ್ಪ (ವಿಠೋಭಾವಿಠಲ) ದೈವಗಳಿಗೆ ಮಾತ್ರ ಈ ಆಚರಣೆಯನ್ನು ಮಾಡುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಸೋಮಲಿಂಗ (ನಾಥ), ಮಲ್ಲಿಕಾರ್ಜುನ (ಮೈಲಾರಮಲ್ಲಯ್ಯ) ದೈವಗಳಿಗೆ ನಡೆಯುತ್ತದೆ ಎನ್ನುವ ಮಾಹಿತಿಗಳು ಸಿಗುತ್ತವೆ. ಆದರೆ ಈ ದೈವಗಳ ಆಚರಣೆಯ ವಿವರಗಳು ದಾಖಲಾಗಿಲ್ಲ. 'ಕರಿಯ ಕಂಥೆ' ಎನ್ನುವುದು ಕುರುಬರಿಗೆ ಪೂಜ್ಯವಾದ ಮತ್ತು ಪವಿತ್ರವಾದ ಒಂದು ವಸ್ತ್ರ. 'ಕಂಥೆ' ಎನ್ನುವ ಶಬ್ದಕ್ಕೆ ಕಿಟ್ಟೆಲ್ ಕೋಶದಲ್ಲಿ ಹೆಣಿಗೆಯಿಂದ ಮಾಡಿದ ವಸ್ತ್ರ, ಶೈವ ಸನ್ಯಾಸಿಗಳು ಧರಿಸುವ ವಸ್ತ್ರ ಎನ್ನುವ ಅರ್ಥಗಳಿವೆ.[೮]

ಅಂದರೆ 'ಕಂಥೆ' ಎನ್ನುವುದು ಕುರುಬ ಜನಾಂಗದವರು ತಮ್ಮ ಕುಲಗುರುವಾದ ಶಿವಸ್ವರೂಪಿ ರೇವಣಸಿದ್ಧರಿಗೆ ಅಚ್ಚ ಕರಿಯ ಉಣ್ಣೆಯಿಂದ ತಯಾರಿಸಿ ಧರಿಸುವ ಒಂದು ಪವಿತ್ರ ವಸ್ತ್ರವೆಂಬುದು ಸ್ಪಷ್ಟವಾಗುತ್ತದೆ. ಈ ಕರಿಯ ಕಂಥೆಯನ್ನು ತಯಾರಿಸುವ ವಿಧಿ-ವಿಧಾನಗಳು ಗಮನ ಸೆಳೆಯುತ್ತವೆ. ಅದನ್ನು ಶ್ರೀಗುರು ರೇವಣಸಿದ್ಧರಿಗೆ ಅರ್ಪಿಸುವ ಕ್ರಮವು ಒಂದು ಕುತೂಹಲಕಾರಿಯಾದ ಆಚರಣೆಯಾಗಿದೆ. ಕರಿಯ ಕಂಥೆಯನ್ನು ಕುರುಬರು ಸಾಮಾನ್ಯವಾದ ಕಂಬಳಿ ನೇಯುವಂತೆ ನೇಯುವುದಿಲ್ಲ. ಬದಲಾಗಿ

ಇದನ್ನು ಸಿದ್ಧಪಡಿಸಲು ಅಚ್ಚ ಕರಿಯ ತುಪ್ಪಟ(ಉಣ್ಣೆ)ವನ್ನು ಬಳಸುತ್ತಾರೆ. ಈ ತುಪ್ಪಟವನ್ನು ಸಂಗ್ರಹಿಸುವ ಕ್ರಮ ಹಾಗೂ ಅವರಿಂದ ಕಂಥೆಯನ್ನು ಸಿದ್ಧಪಡಿಸುವ ವಿಧಿ-ವಿಧಾನಗಳು ಹೀಗಿವೆ.

- **ಉಣ್ಣೆಯನ್ನು ಸಂಗ್ರಹಿಸುವುದು**

ಕುರುಬರು ತಮ್ಮ ಕುಲ ಗುರುವಾದ ರೇವಣಸಿದ್ಧೇಶ್ವರನಿಗೆ ಅರ್ಪಿಸುವ ಕಂಥೆ ಸೇವೆಯು ಪ್ರತಿವರ್ಷ ಮಾಡುವ ಆಚರಣೆಯಲ್ಲ. ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಮಾಡುವ ಒಂದು ಆಚರಣೆ ಇದು. ಈ ಹಿಂದೆ ರೇವಣಸಿದ್ಧರಿಗೆ ಅರ್ಪಿಸುವ ಕಂಥೆಯು ಛಿನ್ನವಾದಾಗ ಮತ್ತೊಂದು ಹೊಸ ಕಂಥೆಯನ್ನು ಅರ್ಪಿಸುವ ತೀರ್ಮಾನವನ್ನು ರೇವಣಸಿದ್ಧೇಶ್ವರ ಮಠದ ಗುರುಗಳು, ಗುಡಿಯ ಗೌಡರು, ಭಂಡಾರಿ, ಸಾವಿರದವರೆಲ್ಲ ಸೇರಿ ಮಾಡುತ್ತಾರೆ. ಹೀಗೆ ತೀರ್ಮಾನ ಮಾಡಿದ ನಂತರ ಅವರೆಲ್ಲ ರೇವಣಸಿದ್ಧೇಶ್ವರ ಮಠದಲ್ಲಿ ಸೇರುತ್ತಾರೆ. ಗರ್ಭಗುಡಿಯಲ್ಲಿರುವ ರೇವಣ್ಣಸ್ವಾಮಿಯ ಮುಂದುಗಡೆಗೆ ಕರಿಯ ಕಂಬಳಿಯ ಗದ್ದುಗೆಯನ್ನು ಹಾಕಿ ಅದರ ಮೇಲೆ ತುಂಬೆಯ ಪುಷ್ಪವನ್ನು ಹಾಕುವ ಮೂಲಕ ಪತ್ರ ಅಥವಾ ಉಣ್ಣೆಯನ್ನು ತರುವ ದಿಕ್ಕನ್ನು ಕುರುವು ಮಾಡಿ ಕೇಳುತ್ತಾರೆ. ಕುರುವು ದೊರೆತ ದಿಕ್ಕಿಗೆ ಮಠದ ಒಡೆಯರುಗಳು, ಗುಡಿಯ ಗೌಡರು, ಉಣ್ಣೆಯನ್ನು ಸಂಗ್ರಹಿಸುವವರು ರೇವಣಸಿದ್ಧೇಶ್ವರ ತೀರ್ಥ ಬಿಲ್ಪತ್ರಿ ಮುಂತಾದ ಪೂಜಾ ಸಾಮಗ್ರಿಯೊಂದಿಗೆ ಹೋಗುತ್ತಾರೆ. ಅಲ್ಲಿ ಕುರಿಹಟ್ಟಿಯ ಯಜಮಾನರನ್ನು ಭೆಟ್ಟಿಮಾಡಿ ತಾವು ಬಂದಿರುವ ವಿಷಯವನ್ನು ತಿಳಿಸುತ್ತಾರೆ. ಅವರ ಕುರಿಯ ಹಿಂಡಿನಲ್ಲಿರುವ ಹುಟ್ಟು ಮರಿಗಳಲ್ಲಿ ಅಚ್ಚ ಕರಿಯ ಮರಿಗಳನ್ನು ಉಲಿಸಿ ಕಂಥೆಯ ಮರಿಗಳೆಂದು ನಿರ್ಧರಿಸುತ್ತಾರೆ. ಅಂದಿನಿಂದ ಈ ಮರಿಗಳ ಉಣ್ಣೆಯು ಪ್ರಥಮ ಕೊಯ್ಲಿಗೆ ಬರುವವರೆಗೂ ಮರಿಗಳನ್ನು ಮೈಲಿಗೆ ಇತ್ಯಾದಿ ಆಗದಂತೆ ಜೋಪಾನವಾಗಿ ನೋಡಿ ಕೊಳ್ಳಲು ಹೇಳಿ ಅಲ್ಲಿಂದ ಹಿಂದಿರುಗುತ್ತಾರೆ.[೯] ಈ ಕಂಥೆ ಮರಿಯನ್ನು ನಿರ್ಧರಿಸುವ ವಿಧಾನವು ಬೇರೊಂದು ರೀತಿಯಾ ಇರುವುದಾಗಿ ತಿಳಿದು ಬರುತ್ತದೆ. ಮಠದ ಒಡೆಯರುಗಳು, ಗುಡಿಯ ಗೌಡ್ರ ಕುರಿಯ ಮಂದೆ ಯಿರುವಲ್ಲಿಗೆ ಪವಿತ್ರ ಜಲ ಬಿಲ್ವದಳಗಳೊಂದಿಗೆ ಹೋಗುತ್ತಾರೆ. ಅಲ್ಲಿ ಕರಿಯ ಕಂಬಳಿಯ ಗದ್ದುಗೆಯ ಮೇಲೆ ರೇವಣ್ಣಸ್ವಾಮಿಯ ಪ್ರಸಾದ ರೂಪದ ಪನಿವಾರವನ್ನು ಹಾಕಿರುತ್ತಾರೆ. ನಂತರ ಅಚ್ಚ ಕರಿಯ ತುಪ್ಪಟವನ್ನು ಹೊಂದಿರುವ ಕೆಲವು ಹುಟ್ಟು ಮರಿಗಳನ್ನು ಹೊಡೆದುಕೊಂಡು ಬಂದು ಕರಿಯ ಕಂಬಳಿಯ ಗದ್ದುಗೆಯ ಹತ್ತಿರ ಬಿಡುತ್ತಾರೆ. ಯಾವ ಮರಿಗಳು ಕಂಬಳಿಯ ಮೇಲಿನ ಪನಿವಾರವನ್ನು ತಿನ್ನುತ್ತವೆಯೋ ಅವುಗಳನ್ನು ಮಾತ್ರ ಕಂಥೆಯ ಮರಿಗಳೆಂದು ನಿರ್ಧರಿಸುತ್ತಾರೆ. ಅವುಗಳಿಗೆ ಮಾತ್ರ ಪವಿತ್ರ ಜಲವನ್ನು ಸಿಂಪಡಿಸಿ (ಪ್ರೋಕ್ಷಿಸಿ), ವಿಭೂತಿಯನ್ನು ಧರಿಸಿ, ಬಿಲ್ವದಳಗಳನ್ನು ಏರಿಸುತ್ತಾರೆ. ಆಮೇಲೆ ಆ ಮರಿಗಳ ಉಣ್ಣೆಯು ಸೊಂಪಾಗಿ ಬೆಳೆದು ಪ್ರಥಮ ಕೊಯ್ಲಿಗೆ ಬರುವವರೆಗೆ ಅವುಗಳನ್ನು ಜೋಪಾನವಾಗಿ ನೋಡಿ ಕೊಳ್ಳುವಂತೆ ಹಟ್ಟಿಯ ಯಜಮಾನರಿಗೆ ಹೇಳಿ ಬರುತ್ತಾರೆ.[೧೦] ಹೀಗೆ ರೇವಣ್ಣಸ್ವಾಮಿಯ ಕಂಥೆ ಮರಿಗಳನ್ನು ನಿರ್ಧರಿಸಿದ ಮೇಲೆ ಆ ಮರಿಗಳು ಬೆಳೆದು ದೊಡ್ಡವಾಗಿ ಅವುಗಳ ತುಪ್ಪಟವು ಸೊಂಪಾಗಿ ಬೆಳೆಯುತ್ತಿ ರುತ್ತದೆ. ಆಗ ಉಣ್ಣೆಯ ಪ್ರಥಮ ಕೊಯ್ಲನ್ನು ಮಾಡುವುದಕ್ಕೆ ರೇವಣ್ಣಸ್ವಾಮಿಯ ಮಠದಲ್ಲಿ ಎಲ್ಲ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ಕಂಥೆ ಮರಿಗಳ ಉಣ್ಣೆಯನ್ನು ಕತ್ತರಿಸಲು ಹೊಸ ಕತ್ತರಿ, ಉಣ್ಣೆಯನ್ನು ತುಂಬಲು ಹೊಸ ಗೊಡೆ, ಗೊಡೆಯನ್ನು ಕಟ್ಟಲು ಹೊಸ ಜೋಳಿಗೆ, ಈ ಉಣ್ಣೆಯ ಕೊಯ್ಲನ್ನು

ಮಾಡುವವರಿಗೆ ಹೊಸ ಬಟ್ಟೆಗಳನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ನಂತರ ರೇವಣ್ಣಸ್ವಾಮಿಯ ಅನುಮತಿಯನ್ನು ಪಡೆದು ಕಂಥೆಯ ಉಣ್ಣೆಯನ್ನು ತರಲು ಹೊರಡುವರು. ಹೀಗೆ ಉಣ್ಣೆಯನ್ನು ತೆಗೆಯುವ ಗೊಡೆ (ಬಿದಿರಿನ ಬುಟ್ಟಿ) ಇತ್ಯಾದಿ ವಸ್ತುಗಳೊಂದಿಗೆ ಮಠದಿಂದ ಗುರುಗಳು, ಗುಡಿಗೌಡ್ರು, ಉಣ್ಣೆಯನ್ನು ಕತ್ತರಿಸುವವರು ಕಂಥೆ ಮರಿಗಳಿರುವ ಹಟ್ಟಿಗೆ ಹೋಗುವರು. ಅಂದು ರಾತ್ರಿ ಅಲ್ಲಿಯೇ ತಂಗಿ, ಮಾರನೆಯ ದಿನ ಬೆಳಿಗ್ಗೆ ತೀರ್ಥಪ್ರಸಾದ ತಳೆದಿದ್ದ ಕಂಥೆ ಮರಿಗಳನ್ನು ಹಟ್ಟಿಯ ಹೊರಗೆ ತಂದು, ಅವುಗಳ ಮೈಯನ್ನು ತೊಳೆದು ಒಣಗಲು ಬಿಡುವರು. ನಂತರ ಉಣ್ಣೆಯನ್ನು ತೆಗೆಯುವವರ ಮಂಡೆಯನ್ನು ತೆಗೆಸಿ, ಮಂಗಳ ಸ್ನಾನವನ್ನು ಮಾಡಿಸಿ ಹೊಸ ಬಟ್ಟೆಗಳನ್ನು ತೊಡಿಸುತ್ತಾರೆ. ಆಮೇಲೆ ಗುರುಗಳು ಕತ್ತರಿಯನ್ನು ಪೂಜಿಸುತ್ತಾರೆ. ಕಂಥೆಯ ಮರಿಗಳಿಗೂ ವಿಭೂತಿ, ಗಂಧವನ್ನು ಹಚ್ಚಿ, ಪುಷ್ಪ, ಬಿಲ್ವದಳ, ಅಕ್ಷತೆಯನ್ನು ಇಟ್ಟು ಅಂಗನೂಲನ್ನು ಕಟ್ಟಿ, ಮಂಗಳಾರತಿಯನ್ನು ಮಾಡುತ್ತಾರೆ. ತಕ್ಷಣವೇ ಉಣ್ಣೆಯನ್ನು ಕತ್ತರಿಸುವವರಿಗೂ ಕಂಕಣವನ್ನು ಕಟ್ಟಿ ಮುಂದಿನ ಕಾರ್ಯಕ್ಕೆ ಅಣಿಗೊಳಿಸುತ್ತಾರೆ. ಯಾರಿಗೂ ಕಾಣದಂತೆ ಸುತ್ತಲೂ ತೆರೆಯನ್ನು ಕಟ್ಟಿ, ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು ಮಾತನಾಡದೇ ಕಂಥೆಯ ಮರಿಗೆ ತಮ್ಮ ಪಾದಸ್ಪರ್ಶವಾಗದಂತೆ ಮೊಣಕಾಲೂರಿ ಕುಳಿತುಕೊಂಡು ಹೊಸ ಕತ್ತರಿಯಿಂದ ಉಣ್ಣೆಯನ್ನು ತೆಗೆಯಲು ಪ್ರಾರಂಭಿಸುವರು. ಹೀಗೆ ಕತ್ತರಿಸಿದ ಉಣ್ಣೆಯನ್ನು ಒಡೆಯರುಗಳು ಜೋಪಾನವಾಗಿ ಗೊಡೆಯಲ್ಲಿ ಅಂದರೆ ಉಣ್ಣೆಯನ್ನು ತುಂಬುವುದಕ್ಕಾಗಿಯೇ ಸಿದ್ಧಗೊಳಿಸಿದ ಬಿದಿರಿನ ಹೊಸಪುಟ್ಟಿಯಲ್ಲಿ ತುಂಬಿಕೊಳ್ಳುತ್ತಾರೆ.

ಹೀಗೆ ಕಂಥೆಯ ಮರಿಗಳಿಂದ ಕತ್ತರಿಸಿದ ಉಣ್ಣೆಯನ್ನು ತೆಗೆದುಕೊಂಡ ಮೇಲೆ ಮಠದ ಗುರುಗಳು ಹಟ್ಟಿಯ ಯಜಮಾನರಿಗೆ ಹಣ್ಣು ವೀಳ್ಯೆಯೊಂದಿಗೆ ಒಂದು ಹಣ (೧೧/೨ ರೂ) ಒಂದು ವಸ್ತ್ರವನ್ನು ನೀಡಿ ಮಠದ ಪರವಾಗಿ ಗೌರವಿಸುತ್ತಾರೆ. ಉಣ್ಣೆಯನ್ನು ತುಂಬಿಕೊಂಡ ಗೊಡೆಯನ್ನು ಹೊಸ ಜೋಳಿಗೆಯಲ್ಲಿಟ್ಟು ಕಟ್ಟಿ ಮತ್ತೊಮ್ಮೆ ಮಂಗಳಾರತಿ ಮಾಡಿದ ನಂತರ ಎಲ್ಲರಿಗೂ ಫಲಹಾರವನ್ನು ಕೊಡಲಾಗುತ್ತದೆ. ನಂತರ ಗಂಗಾಮಾತೆಯ ಪೂಜೆಗೆ ಸಿದ್ದಗೊಳಿಸಿದ ಗದ್ದುಗೆಯನ್ನು ವಿಸರ್ಜಿಸುತ್ತಾರೆ. ಆಮೇಲೆ ಗುರುಗಳೂ ಮತ್ತು ಪುಷ್ಪ(ಉಣ್ಣೆ)ವನ್ನು ತೆಗೆಯುವವರು ನೆನೆಹಾಕಿದ ಮೊಳಕೆಯ ಹೆಸರು ಕಾಳಿನ ಫಲಹಾರವನ್ನು ಸ್ವೀಕರಿಸುತ್ತಾರೆ. ಇಲ್ಲಿಂದ ಮೊದಲಗೊಂಡು ಕಂಥಾ ನೇಯ್ಗೆಯ ಸಿದ್ಧತೆ ಮುಗಿಯುವವರೆಗೂ ಗುರುಗಳು ಮತ್ತು ಕಂಥೆಯನ್ನು ನೇಯುವವರು ಹಗಲು ರಾತ್ರಿಯನ್ನದೇ ಪ್ರತಿದಿನವೂ ಕೇವಲ ನೆನೆಹಾಕಿದ ಹೆಸರು ಕಾಳಿನ ಫಲಹಾರವನ್ನೇ ಸ್ವೀಕರಿಸಬೇಕು ಎನ್ನುವ ನಿಯಮವಿದೆ. ಇದನ್ನು ಈಗಲೂ ತಪ್ಪದೇ ಪಾಲಿಸುತ್ತಾರೆ. ಇದನ್ನು ಮೀರಿದರೆ ನಮಗೆ ನಮ್ಮ ಮನೆತನಕ್ಕೆ ಧಕ್ಕೆಯುಂಟಾಗುತ್ತದೆ ಎನ್ನುವ ನಂಬಿಕೆ, ಭಯ ಇವರಲ್ಲಿದೆ. ಇದರ ಜೊತೆಗೆ ಎಳನೀರನ್ನು ಕುಡಿಯುವುದು ಪದ್ಧತಿ ಇದೆ. ಇದನ್ನು ಹೊರತುಪಡಿಸಿ ಬೇರೆ ಆಹಾರವನ್ನು ಸ್ವೀಕರಿಸುವುದಿಲ್ಲ. ನೀರನ್ನು ಸಹ ಕುಡಿಯುವುದಿಲ್ಲ. ಇದು ಅನುಚಾನವಾಗಿ ನಡೆದುಕೊಂಡು ಬಂದಿರುವ ಒಂದು ವ್ರತವಾಗಿದೆ.

ಈ ರೀತಿಯಾಗಿ ಉಣ್ಣೆಯನ್ನು ತುಂಬಿದ ಗೊಡೆಯನ್ನು ಹೊತ್ತುಕೊಂಡು ಮಠದ ಗುರುಗಳು ಮತ್ತು ಸಹಚರರು ಜೋಪಾನವಾಗಿ ಯಾವುದೇ ರೀತಿಯ ಮೈಲಿಗೆ ಆಗದಂತೆ ಹಳ್ಳಿಗಳ ಹೊರ ಹಾದಿಗಳಲ್ಲೇ

ಸಾಗುತ್ತಾರೆ. ದಾರಿಯಲ್ಲಿ ಸಿಗುವ ದೇವಾಲಯಗಳಿಗೆ ಕಾಯಿ, ಕರ್ಪೂರ ಸೇವೆಯನ್ನು ಸಲ್ಲಿಸುತ್ತ ಮುಂದು ವರೆಯುತ್ತಾರೆ. ಹೀಗೆ ಹೊರಟು ರಾತ್ರಿಯ ಹೊತ್ತಿಗೆ ತಮ್ಮ ಮಠವಿರುವ ಊರಿನ ಹೊರಭಾಗದಲ್ಲಿ ಒಂದು ಶುಭ್ರವಾದ ಸ್ಥಳದಲ್ಲಿ ಸ್ವಲ್ಪ ಸಮಯ ವಿಶ್ರಮಿಸುತ್ತಾರೆ. ಕಂಥೆಯ ಉಣ್ಣೆಯನ್ನು ತೆಗೆದುಕೊಂಡು ಬಂದಿರುವ ವಿಚಾರವನ್ನು 'ಕೊಲ್ಕಾರ' ಗ್ರಾಮದ 'ಗುಡಿಕಟ್ಟು' ನಾಯಕರಿಗೆ ತಿಳಿಸುತ್ತಾನೆ. ಇದನ್ನು ತಿಳಿದ ಮಠದ ಗುರುಗಳು, ಗೌಡ್ರು, ಸದಸ್ಯರು ಸೇರಿ ಅವರು ಬೀಡು ಬಟ್ಟಲಿಗೆ ಬರುತ್ತಾರೆ. ಅಲ್ಲಿ ಮತ್ತೊಮ್ಮೆ ಹಣ್ಣು ಕಾಯಿ ಸಲ್ಲಿಸಿದ ನಂತರ ಊರ ಜನರ ಸಂಚಾರವೆಲ್ಲ ನಿಂತ ಮೇಲೆ ದೀವಟಿಗೆಯ ಬೆಳಕಿನಲ್ಲಿ ಮಠಕ್ಕೆ ಬರುತ್ತಾರೆ. ಮಠದ ಮುಂದೆ ಆರತಿಯನ್ನು ಬೆಳಗಿ ಈಡುಗಾಯಿಯನ್ನು ಒಡೆದ ಮೇಲೆ ಒಳಗೆ ಪ್ರವೇಶಿಸಿ ಕಂಥೆಯ ಉಣ್ಣೆಯನ್ನು ತುಂಬಿರುವ ಗೊಡೆಯನ್ನು ರೇವಣ್ಣಸ್ವಾಮಿಯ ಗದ್ದುಗೆಯ ಮೇಲೆ ಇಡುತ್ತಾರೆ. ಇಲ್ಲಿಗೆ ಉಣ್ಣೆ ತರುವ ಆಚರಣೆ ಮುಕ್ತಾಯವಾಗುತ್ತದೆ. ನಂತರ ನೇಯ್ಗೆ ವಿಧಾನಕ್ಕೆ ತಯಾರಿ ಮಾಡಿಕೊಳ್ಳುತ್ತಾರೆ.

**ಕಂಥೆ ನೇಯ್ಗೆ ವಿಧಾನ**

ಮೇಲೆ ವಿವರಿಸಿದ ಕ್ರಮದಲ್ಲಿ ಅತ್ಯಂತ ಶ್ರದ್ಧಾಭಕ್ತಿಯಿಂದ ಕಂಥೆ ಮರಿಯ ಪ್ರಥಮ ಕೊಯ್ಲಿನ ಉಣ್ಣೆಯನ್ನು ತೆಗೆದುಕೊಂಡು ಬರುತ್ತಾರೆ. ಶ್ರೀ ರೇವಣ್ಣಸಿದ್ಧೇಶ್ವರ ಮಠದ ಗರ್ಭಗುಡಿಯಲ್ಲಿ ಸ್ವಾಮಿಯ ಮೂರ್ತಿಯ ಎದುರುಗಡೆಯಲ್ಲಿ ಇಟ್ಟು ವಿಧಿವತ್ತಾಗಿ ಪೂಜೆಯನ್ನು ಮಂಡೆಯನ್ನು ಬೋಳಿಸಿಕೊಂಡು, ಸ್ನಾನವನ್ನು ಮಾಡಿ ಮಡಿಯುಟ್ಟು ಉಪವಾಸವಿದ್ದು ಕಂಥೆಯನ್ನು ಸಿದ್ಧಪಡಿಸುವ ಕಾರ್ಯಕ್ಕೆ ತೊಡಗುತ್ತಾರೆ. ಈ ಕಂಥೆಯ ನೇಯ್ಗೆ ಮಾಡುವುದನ್ನು ಯಾರಿಗೂ ಕಾಣದಂತೆ ಗರ್ಭಗುಡಿಯ ಒಳಗೆಯೇ ಮಾಡಲಾಗು ತ್ತದೆ. ನೇಯ್ಗೆಯ ಕಾರ್ಯವನ್ನು ಮಾಡುವರು. ಇವರು ಅನುಸರಿಸುವ ವಿಧಾನಗಳು ಗಮನ ಸೆಳೆಯುತ್ತವೆ. ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು ಮಾತನಾಡದೇ ಕಾಲು ತಾಕದಂತೆ ಕಾಲನ್ನು ಹಿಂದಕ್ಕೆ ಮಡಿಸಿಕೊಂಡು ಕುಳಿತುಕೊಳ್ಳುವರು. ಅದರಂತೆ ಕಂಥೆಯನ್ನು ನೇಯುವ ಕೆಲಸವನ್ನು ಮಾಡುವವರು ಕಂಥೆಯ ನೇಯ್ಗೆ ಪೂರ್ಣವಾಗುವವರೆಗೆ ಮಗ್ಗದ ಮನೆಯಿಂದ ಯಾವುದೇ ಕಾರ್ಯಕ್ಕೆ ಹೊರಗೆ ಬಂದರೆ ಮತ್ತೆ ಸ್ನಾನವನ್ನು ಮಾಡಿಕೊಂಡೇ ಒಳಗೆ ಹೋಗಬೇಕು. ಇದು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದ ನಿಯಮವಾಗಿದೆ. ರೇವಣಸಿದ್ಧೇಶ್ವರ ಕಂಥೆಯನ್ನು ನೇಯುವುದಕ್ಕೆ ಕುರುಬರು ಕಂಬಳಿಯನ್ನು ನೇಯುವುದಕ್ಕೆ ಬಳಸುವ ರಾಟೆ, ಮಗ್ಗ ಇತ್ಯಾದಿ ಉಪಕರಣಗಳನ್ನು ಬಳಸುವುದಿಲ್ಲ. ಕೈಯಿಂದಲೇ ಉಣ್ಣೆಯನ್ನು ಹಿಂಜಿ ಹಿಂಜಿ ಹಂಜಿಯನ್ನು ಮಾಡುತ್ತಾರೆ. ಆಮೇಲೆ ಕೈಯಿಂದಲೇ ತೊಡೆಗದಿರಿನ ಮೇಲೆ ನೂಲನ್ನು ತೆಗೆಯುತ್ತಾರೆ. ಹೀಗೆ ತೊಡೆಗದಿರಿನಿಂದ ತಗೆದ ನೂಲನ್ನು ಉಂಡೆ ಮಾಡಿ ಇಟ್ಟುಕೊಳ್ಳುತ್ತಾರೆ. ನಂತರ ಸಣ್ಣ ಸಣ್ಣ ಬಿದಿರಿನ ಕಡ್ಡಿಯಿಂದ ಮಗ್ಗದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ನಾಲ್ಕು ಜನ ಒಡೆಯರುಗಳು ತಮ್ಮ ಹಸ್ತಗಳ ಬೆರಳುಗಳ ನಡುವೆ ಅಣೆಯಿಟ್ಟು ವಸ್ತ್ರವನ್ನು ಹೆಣೆಯುತ್ತಾರೆ. ಈ ವಸ್ತ್ರ ಸುಮಾರು ಒಂದುವರೆ ಗೇಣು ಉದ್ದ, ಒಂದು ಗೇಣು ಅಗಲದಷ್ಟಿರುತ್ತದೆ. ಸಿದ್ಧ ಮಾಡಿದ ಕಂಥೆಯು ಕರಿಯನಾಗರ ಹೆಡೆಯಂತೆ ಮಿಂಚುತ್ತದೆ. "ಈ ಕರಿಯ ಕಂಥೆಯನ್ನು ನೇಯುವುದಕ್ಕೆ ಒಡೆಯರುಗಳಿಗೆ ವೀರಮಕ್ಕಳ ಮನೆತನದವರು ಸಹಾಯವನ್ನು ಮಾಡುತ್ತಾರೆ. ಅವರೂ ಸಹ ಶ್ರೀರೇವಣಸಿದ್ಧನ ಹೆಸರಿನಲ್ಲಿ ದೀಕ್ಷೆ

ಪಡೆದವರೇ ಆಗಿರುತ್ತಾರೆ. ಆದರೆ ವೀರಮಕ್ಕಳು ಗುರುಗಳಲ್ಲಿ ಕುರುಬರ ಬೇರೆ ಬೇರೆ ಬೆಡಗಿಗೆ ಸೇರಿದವರಾಗಿರುತ್ತಾರೆ.[೧೧] ಕಂಥೆಯ ನೇಯ್ಗೆಯ ಕಾರ್ಯವು ಪ್ರಾರಂಭವಾದಂದಿನಿಂದ ಅದು ಮುಗಿಯುವವರೆಗೆ ಮೂರು ನಾಲ್ಕು ದಿವಸ ಕುರುಬ ಸಮಾಜದ ಎಲ್ಲ ಬಂಧು-ಬಾಂಧವರು ತಮ್ಮ ಕೆಲಸ ಕಾರ್ಯಗಳನ್ನು ಬಿಟ್ಟು ಗುರು ಕಾಯಕದಲ್ಲಿ ಸಹಕರಿಸುವಂತೆ ಗುರುಮಠವು ಕೋರಿಕೊಂಡಿರುತ್ತದೆ. ಗುರುಮಠದ ಕೋರಿಕೆಯಂತೆ ಇಡೀ ಸಮಾಜದವರು ಅತ್ಯಂತ ಶ್ರದ್ಧೆ, ಭಕ್ತಿಯಿಂದ ಸ್ವಾಮಿಯ ಕಾರ್ಯದಲ್ಲಿ ತೊಡಗಿಕೊಂಡಿರುತ್ತಾರೆ. ಈ ರೀತಿಯಾಗಿ ಅತ್ಯಂತ ಕಟ್ಟುನಿಟ್ಟಾಗಿ ವಿಧಿ ನಿಯಮಗಳನ್ನು ಪಾಲಿಸುತ್ತ ಕಂಥೆಯನ್ನು ಸಿದ್ಧಗೊಳಿಸುತ್ತಾರೆ. ಹೀಗೆ ಸಿದ್ಧಗೊಳಿಸಿದ ಕಂಥೆಯನ್ನು ಶ್ರೀಗುರು ರೇವಣಸಿದ್ಧೇಶ್ವರಿಗೆ ಅರ್ಪಿಸುವುದು ಕುರುಬ ಜನಾಂಗದವರಿಗೆ ಒಂದು ಸಂಭ್ರಮ ಸಡಗರ, ಅಷ್ಟೇ ಅಲ್ಲ ಒಂದು ಅದ್ದೂರಿಯ ಹಬ್ಬವಾಗಿದೆ.

**ಕಂಥಾಧಾರಣೆ**

ಕಂಥೆಯ ನೇಯ್ಗೆಯ ಕಾರ್ಯ ಸಂಪೂರ್ಣಗೊಂಡ ನಂತರ ಪ್ರಾರಂಭದಲ್ಲಿಯೇ ತೀರ್ಮಾನಿಸಿದಂತೆ ಸಾವಿರದವರು, ಗುಡಿಯ ಗೌಡರು ಮತ್ತು ಸಕಲ ಕುಲಬಾಂಧವರು ಸೇರಿ ಜಾತ್ರೆಯನ್ನು ಪ್ರಾರಂಭಿಸುವರು. ಜಾತ್ರೆಯಲ್ಲಿ ನಡೆಯುವ ಆಚರಣೆಯ ವಿವರಗಳು ಕೆಳಗಿನಂತೆ ಇರುತ್ತವೆ. ಮೊದಲನೆಯ ದಿನ ಬೆಳಿಗ್ಗೆ ಕುರುಬರ ಕುಲದೈವವಾದ ಶ್ರೀ ಬೀರೇಶ್ವರನನ್ನು ಗುರುಮಠಕ್ಕೆ ಕರೆತಂದು ಪೂಜೆಯ ಕಾರ್ಯ ಮಾಡಲಾಗುತ್ತದೆ. ಇದು ಮುಗಿದ ನಂತರ ಧರ್ಮದ ಧ್ವಜಾರೋಹಣ ನಡೆಯುತ್ತದೆ. ಈ ಜಾತ್ರೆಯು ಪ್ರಾರಂಭವಾದಂದಿನಿಂದ ಅದು ಮುಕ್ತಾಯವಾಗುವವರೆಗೆ ಕುಲಬಾಂಧವರು ತಮ್ಮ ದೈನಂದಿನ ಕೆಲಸ ಕಾರ್ಯಗಳಾದ ನೂಲುವುದು, ನೇಯುವುದು, ಕೃಷಿ ಇತ್ಯಾದಿ ಚಟುವಟಿಕೆಗಳನ್ನು ತ್ರಿಕರಣ ಪೂರ್ವಕವಾಗಿ ನಿಲ್ಲಿಸಿ ಸ್ವಾಮಿಯ ಕಂಥಾಧಾರಣ ಜಾತ್ರೆಯಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ. ಧ್ವಜಾರೋಹಣ ಮುಗಿದ ನಂತರ 'ಗಂಗೆ ಪೂಜೆ' ಆರಂಭವಾಗುತ್ತದೆ.

ರೇವಣಸಿದ್ಧೇಶ್ವರನಿಗಾಗಿ ಸಿದ್ಧಗೊಂಡಿರುವ ಕಂಥೆಯನ್ನು ಅರ್ಪಿಸಲು ಗಂಗಾ ಸ್ನಾನಕ್ಕೆ ಹೋಗಲು ಎಲ್ಲ ಸಿದ್ಧತೆಯನ್ನು ಮಾಡುತ್ತಾರೆ. ಮೊದಲಿಗೆ ಸ್ವಾಮಿಯ ಬೆಳ್ಳಿ ಪಲ್ಲಕ್ಕಿ, ಬಂಗಾರದ ಗೂಡೆ ಇತ್ಯಾದಿಗಳನ್ನು ಹೊರುವವರು ಮಂಡೆ ಸೇವೆಯನ್ನು ಮುಗಿಸುತ್ತಾರೆ. ಆಮೇಲೆ ಅವರೆಲ್ಲರಿಗೂ ಮಠದವತಿಯಿಂದಲೇ ಹೊಸ ಬಟ್ಟೆಗಳನ್ನು ಕೊಡುತ್ತಾರೆ. ಬೆಳ್ಳಿಯ ಪಲ್ಲಕ್ಕಿಯನ್ನು ಶುಭ್ರವಾಗಿ ಬೆಳಗಿ ನಾಲ್ವರು ಒಟ್ಟಾರೆಯಾಗಿ ಹೊರುವಂತೆ ಅಡ್ಡೆ ಕಟ್ಟುತ್ತಾರೆ. ಗೊಂಡೆ, ಬಹುಮಾನದ ಕುಚ್ಚುಗಳನ್ನು ಕಟ್ಟಿ, ಕೊಂಬುಗಳಿಗೆ ತೊಡಕೆ ತೊಡಿಸಿ ದಂಡಿಗೆಯ ಮುಂದಿನ ಹಿಂದಿನ ಬಾಯಿಗಳಿಗೆ ಸಿಂಹದ ಮುಖವಾಡಗಳನ್ನು ಸಿಕ್ಕಿಸುತ್ತಾರೆ. ಮೇಲೆ ರೇಷ್ಮೆಯ ವಡವಿ ಹಾಕಿ ನಡುವೆ ಪಂಚಕಲಶ ಧರಿಸಿ, ಬಗೆ ಬಗೆಯ ಹೂವು ಹಾರಗಳಿಂದ ಅಲಂಕಾರ ಮಾಡುತ್ತಾರೆ. ಈ ಅಲಂಕಾರ ನೋಡುವವರ ಕಣ್ಮನ ಸೆಳೆಯುವಂತೆ ಇರುತ್ತದೆ. ರೇವಣ್ಣಸ್ವಾಮಿಯ ಬೆಳ್ಳಿಯ ಪಲ್ಲಕ್ಕಿಯನ್ನು ಆದಿಯಿಂದಲೂ 'ಗುಡಿಗೌಡ'ರ ಮನೆಯವರೇ ಹೊರುವ ಪದ್ಧತಿ ಇದೆ. ಇವರನ್ನು ಮುಂದಿನ 'ಕೊಂಮಿ'ನವರು ಹಿಂದಿನ 'ಕೊಂಮಿ'ನವರು ಎಂದು ಕರೆಯುವುದು ವಾಡಿಕೆಯಾಗಿದೆ. ಇವರೊಂದಿಗೆ ಬಂಗಾರದ ಗೂಡೆಯನ್ನು, ನೂತನ ಕಂಥೆಯನ್ನು ಹೂರುವ ಗುರುಗಳು

ಜೊತೆಯಲ್ಲಿಯೇ ಸಾಗುವರು. ಇವರೆಲ್ಲರೂ ಬರಿಗಾಲಿನಲ್ಲಿಯೇ ನಡೆದುಕೊಂಡು ಹೋಗಿ ಬರುತ್ತಾರೆ. ಚಪ್ಪಲಿಗಳನ್ನು ಧರಿಸಬಾರದು ಎನ್ನುವ ನಿಯಮವಿದೆ. ಹಾಗಾಗಿ ಇವರು ಚಪ್ಪಲಿಗಳನ್ನು ಹಾಕುವುದಿಲ್ಲ. ಚಪ್ಪಲಿ ಹಾಕಿದವರನ್ನು ಹತ್ತಿರ ಕರೆದುಕೊಳ್ಳುವುದಿಲ್ಲ. ಇವರನ್ನು ಭೇಟಿ ಆಗುವವರು ದೂರದಲ್ಲಿ ಚಪ್ಪಲಿಗಳನ್ನು ಬಿಟ್ಟು ಹೋಗುತ್ತಾರೆ.

ಇಷ್ಟರಲ್ಲಾಗಲೇ ಮಠದ ಬಸವ(ಗೂಳಿ)ನಿಗೆ ಮೈತೊಳೆದು ಕೊಂಬಿಗೆ ಬಣ್ಣ ಹಚ್ಚಿ, ಬೆಳ್ಳಿಯ ಅಣಸು ಸಿಕ್ಕಿಸಿ, ಕೊರಳಿಗೆ ಗಂಟೆ, ಗಗ್ಗರ, ಸರಗಟ್ಟಿ, ಕಾಲಿಗೆ ಕಾಲಂದಿಗೆ ಕಟ್ಟಿ, ಹಣೆಗೆ ಗಂಧಾಕ್ಷತೆಯನ್ನು ಇಟ್ಟು, ಮೈಮೇಲೆ ಮಿರಮಿರನೆ ಮಿನುಗುವ ಡಮಾಸು ಹಾಸಿ, ಜುಲಾವನ್ನು ಬಿಗಿದು ಅದರ ಮೇಲೆ ಜೋಡಿ ನಗಾರಿಗಳನ್ನು ಕಟ್ಟುತ್ತಾರೆ. ಜೊತೆಗೆ ಕರಡೆವು ಮೌರಿ ಜೋಡಿ ವಾದ್ಯಗಳೊಂದಿಗೆ ಬಿಳಿಯ ಛತ್ರಿ ಚಾಮರ, ಪಕ್ಕೇವು, ಬಣ್ಣ ಬಣ್ಣದ ಮಕರ ತೋರಣ ಬಿರುದಾವಳಿಗಳಿಂದ ಕೂಡಿದ ಕಸೆಪಂಚೆ, ಕೋಟು, ಪೇಟಧಾರಿಗಳಾದ ಗೌಡರು, ರೇಷ್ಮೆ ಬಟ್ಟೆ, ಜರತಾರಿ ಶಲ್ಯಾಧಾರಿಗಳಾದ ಸಾವಿರದವರು, ನಿಲುವಂಗಿ, ರುಮಾಲು, ಡವಾಲಿ ಸೊಂಟಪಟ್ಟಿ ಬಿಗಿದಿರುವ ಭಂಡಾರಿಗಳನ್ನೊಳಗೊಂಡ ಸ್ವಾಮಿಯ ಪರಿವಾರದವರೆಲ್ಲ ಸಿದ್ಧರಾಗುತ್ತಾರೆ. ಇವರೆಲ್ಲರೂ ತಮ್ಮನ್ನು 'ಸೇವಕ'ರೆಂದು ಕರೆದುಕೊಳ್ಳುತ್ತಾರೆ. ಇವರ ಮುಂದೆ ಜಾನಪದ ವಾದ್ಯಗಳಾದ ಡೊಳ್ಳು, ಚಮ್ಮೇಳ, ಕರಡೆ, ಮೌರಿ ಮುಂತಾದ ವಾದ್ಯ ವೈಭವಗಳು, ಇವರ ಹಿಂದೆ ಗೊರವಪ್ಪನವರು, ನಂತರ ದಾಸಪ್ಪನವರು ಸಾಗುತ್ತಾರೆ. ಅವರ ಹಿಂದೆ ಬಂಗಾರದ ಗೂಡೆ ಹೊತ್ತವರು, ನೂತನವಾಗಿ ಸಿದ್ಧಗೊಳಿಸಿದ ಕಂಥೆಯನ್ನು ಹೊತ್ತ ಒಡೆಯರುಗಳು, ವೀರಮಕ್ಕಳು, ಪೂಜಾರರು, ವಿವಿಧ ದೇವರುಗಳಿಗೆ ದೀಕ್ಷೆ ಹೊತ್ತವರು ಹೋಗುತ್ತಾರೆ. ಇದರಲ್ಲಿ ಮುಖ್ಯವಾಗಿ ಮೈಲಾರನ ಹೆಸರಿನಲ್ಲಿ ದೀಕ್ಷೆ ಹೊತ್ತ ಗೊರವ, ಗೊರವತಿಯರು, ಯಲ್ಲಮ್ಮನ ಹೆಸರಿನಲ್ಲಿ ದೀಕ್ಷೆ ಹೊತ್ತ 'ಚೌಡಿಕಿ'ಯವರು, ಮಾರಮ್ಮ (ಮಾಯಿ) ಹೆಸರಿನಲ್ಲಿ ದೀಕ್ಷೆ ತೆಗೆದುಕೊಂಡ ಪೂಜಾರಿಗಳು ಪ್ರಮುಖವಾಗಿ ಕಾಣಿಸುತ್ತಾರೆ. ಆಮೇಲೆ ಅಪಾರವಾದ ಸ್ವಾಮಿಯ ಭಕ್ತರಾದ ಸಾವಿರದವರು, ಅವರ ನೆಂಟರು ಬಂಧುಬಳಗ, ಅಪಾರ ಸಂಖ್ಯೆಯ ಹೆಣ್ಣುಮಕ್ಕಳು ಸಾಗುತ್ತಾರೆ. ಹೀಗೆ ಕ್ರಮಬದ್ಧವಾಗಿ ಸಾಗಬೇಕು ಅನ್ನುವ ನಿಯಮವಿದೆ. ಆ ಪಾರಂಪರಿಕ ನಿಯಮದಂತೆ ವರ್ಗೀಕರಿಸಿಕೊಂಡು ನಡೆಯುತ್ತಿರುತ್ತಾರೆ. ಈ ಎಲ್ಲ ಪರಿವಾರದ ಹಿಂದೆ ಅಲಂಕಾರಗೊಂಡಿರುವ ಶ್ರೀಗುರು ರೇವಣಸಿದ್ಧೇಶ್ವರರ ಕುಲದೈವ ಶ್ರೀ ಬೀರಲಿಂಗೇಶ್ವರ ಸ್ವಾಮಿಯ ಪಲ್ಲಕ್ಕಿಗಳು ಸಾಗುತ್ತವೆ. ಹೀಗೆ ಕ್ರಮಬದ್ಧವಾಗಿ ಸಾಗುವ ಸ್ವಾಮಿಯ ಮೆರವಣಿಗೆಯು ನೋಡುವವರ ಕಣ್ಮನ ಸೆಳೆಯುವಂತೆ ಇರುತ್ತದೆ. ಈ ರೀತಿಯಲ್ಲಿ ಸಾಗಿದ ಸ್ವಾಮಿಯ ಮೆರವಣಿಗೆಯು ಸಂಜೆಯ ಹೊತ್ತಿಗೆ ಹತ್ತಿರದಲ್ಲಿಯೇ ಇರುವ ಗಂಗೆಯ ತಡಿಯನ್ನು ತಲುಪುತ್ತದೆ. ಇಡೀ ಭಕ್ತ ಸಮೂಹದವರು ಅಂದು ರಾತ್ರಿ ಗಂಗೆಯ ತಡಿಯಲ್ಲಿಯೇ ಜಾಗರಣೆಯನ್ನು ಮಾಡುತ್ತಾರೆ. ಮಹಿಳೆಯರು ಕಂಥೆ ಸೇವೆ ಮತ್ತು ತಗರ ಪವಾಡ ವಸ್ತು ಆಧಾರಿತ ಜನಪದ ಗೀತೆಗಳನ್ನು ಹಾಡುತ್ತಾರೆ. ನೆರೆದ ಈ ಎಲ್ಲ ಭಕ್ತ ಸಮೂಹಕ್ಕೆ ಸ್ವಾಮಿಯ ಭಕ್ತರಾದ ಸಾವಿರದವರು ಊಟದ ವ್ಯವಸ್ಥೆಯನ್ನು ಅಲ್ಲಿಯೇ ಅಚ್ಚುಕಟ್ಟಾಗಿ ಮಾಡಿರುತ್ತಾರೆ.

ಮೂರನೆಯ ದಿವಸ ಬೆಳಗಿನ ಜಾವ ಸೂರ್ಯೋದಯಕ್ಕೆ ಮುಂಚೆ ದೇವತಾಕಾರ್ಯ ಆರಂಭ ವಾಗುತ್ತದೆ. ಮೊದಲು ಗಂಗೆ ತಡಿಯಲ್ಲಿ ರೇವಣಸಿದ್ಧೇಶ್ವರನ ಪೂಜೆಗೆ ನೂತನವಾಗಿ ತೋಡಿರುವ ಬಾವಿಯನ್ನು ಪೂಜಿಸಿಸುತ್ತಾರೆ. ಆಮೇಲೆ ಅದರ ಸುತ್ತಲೂ ನಿರ್ಮಿಸಿರುವ ತೆರೆಯ ಒಳಗೆ ದೇವರುಗಳನ್ನು ನೂತನವಾಗಿ ತೆಗೆದಿರುವ ಬಾವಿಯ ಮುಂದೆ ಹಾಸಿರುವ ಮಡಿಯ ಮೇಲೆ ಪ್ರತಿಷ್ಠಾಪಿಸುತ್ತಾರೆ. ಹೀಗೆ ತೋಡಿರುವ ಬಾವಿ ಮತ್ತು ರೇವಣ್ಣಸ್ವಾಮಿಯ ಮಧ್ಯದಲ್ಲಿ ಗುರುಕಲಶವನ್ನು ಹೂಡುತ್ತಾರೆ. ಈ ರೀತಿ ಯಲ್ಲಿ ಹೂಡಿರುವ ಕಲಶಕ್ಕೆ ಗುರುಗಳು ಸ್ವಾಮಿಯ ಕೊರಳಿನಿಂದ ಸೂತ್ರವನ್ನು ಬಿಡುವರು. ಈ ಕ್ರಿಯೆ ಯಿಂದ ಸೂತ್ರದ ಮೂಲಕ ದೈವಿಶಕ್ತಿಯು ಗುರುಕಲಶಕ್ಕೆ ಬರುವುದೆಂಬ ಬಲವಾದ ನಂಬಿಕೆ ಜನರಲ್ಲಿದೆ. ನಂತರ ಹೊಸದಾಗಿ ಸಿದ್ಧಗೊಳಿಸಿರುವ ಕಂಥೆಯನ್ನು ನೇಯ್ಗೆ ಮಾಡಿದವರು ಆಗ ತಾನೆ ಹೊಸದಾಗಿ ತೆಗೆದಿರುವ ಬಾವಿಯ ನೀರಿನಲ್ಲಿ ತೊಳೆದು ಕಂಥೆಯ ಗಂಜಿಯನ್ನು ಹೋಗಲಾಡಿಸಿ ಅದನ್ನು ಗುರುಗಳ ಕೈಗೆ ಕೊಡುತ್ತಾರೆ. ಗುರುಗಳು ಮತ್ತೊಮ್ಮೆ ಅದೇ ಬಾವಿಯ ನೀರಿನಿಂದ ತೊಳೆದಾಗ ಕಂಥೆಯು ಪವಿತ್ರ ವಾಗುತ್ತದೆ. ಹೀಗೆ ತೊಳೆದ ಕಂಥೆಯನ್ನು ಗಂಧದ, ಸಾಂಬ್ರಾಣಿಗಳ ಚಕ್ಕೆಯನ್ನು ಸ್ವಲ್ಪ ಸ್ವಲ್ಪವೇ ಕಿಚ್ಚಿನಲ್ಲಿ ಹಾಕುತ್ತ ಅದರ ಹೊಗೆಯಲ್ಲಿಯೇ ಮಡಿ ಮಾಡಿರುವ ಕಂಥೆಯನ್ನು ಹಿಡಿದು ಚೆನ್ನಾಗಿ ಒಣಗಿಸುತ್ತಾರೆ. ಅಷ್ಟೊತ್ತಿಗಾಗಲೇ ಕಂಥಾಧಾರಣ ಸೇವೆಗೆ ಸಂಬಂಧಿಸಿದ ಸಕಲ ಪೂಜಾಕ್ರಿಯೆಗಳನ್ನು ಇತರರು ಸಿದ್ಧಗೊಳಿಸಿರುತ್ತಾರೆ. ಆ ಮೇಲೆ ಗುರುಗಳು ಎಲ್ಲಾ ಮಠದ ಭಕ್ತರುಗಳ ಆಶಯದಂತೆ ನಿಗದಿಗೊಳಿದ ಮಂಗಳಮಯ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಮಂಗಲವಾದ್ಯಗಳ ಮೊಳಗುವಿಕೆಯು ಆರಂಭವಾಗುತ್ತದೆ. ಭಕ್ತರುಗಳ ಹರ್ಷೋದ್ಗಾರ ಮುಗಿಲು ಮುಟ್ಟಿರುತ್ತದೆ. ಈ ಸಂಭ್ರಮದ ನಡುವೆ ಗುರುಗಳು ಶ್ರೀಗುರು ರೇವಣಸಿದ್ಧೇಶ್ವರಸ್ವಾಮಿಗೆ ನೂತನವಾಗಿ ನಿರ್ಮಿಸಿರುವ ಕಂಥೆಯನ್ನು ಧಾರಣಮಾಡು ತ್ತಾರೆ. ಆ ಸಂದರ್ಭದಲ್ಲಿ ನೆರೆದ ಭಕ್ತರು ಜಯ-ಘೋಷಣೆಗಳನ್ನು ಕೂಗುತ್ತಾರೆ. ವಿಜಯದ ಸಂಕೇತದಂತೆ ಕಾಣುತ್ತವೆ. ಇಲ್ಲಿ ಒಡೆಯರು ಸಹ ರೇವಣಸಿದ್ಧ ಸೇವಕರಾಗಿ ಕಾರ್ಯನಿರ್ವಹಿಸುವುದನ್ನು ನೋಡಿದರೆ ಶಾಂತಮುತ್ತಯ್ಯ ರೇವಣಸಿದ್ಧನ ಶಿಷ್ಯ ಆಗಿದ್ದ ಅನ್ನುವುದು ಖಚಿತವಾಗಿ ತಿಳಿದುಬರುತ್ತದೆ. ಏಕೆಂದರೆ ಒಡೆಯರು ಇದನ್ನು ಶಾಂತಮುತ್ತಯ್ಯನಿಂದ ಬಂದ ಕಾಯಕವೆಂದು ಹೇಳುತ್ತಾರೆ. ಆದರೆ ರೇವಣಸಿದ್ಧನ ಮೂಲ ನೆಲೆಗಳಲ್ಲಿ ಈ ಆಚರಣೆ ವಿಸ್ಮೃತಿ ಆಗಿರುವುದು ಕುತೂಹಲವನ್ನುಂಟು ಮಾಡುತ್ತದೆ. ಇದಕ್ಕೆ ಇರಬಹುದಾದ ಕಾರಣಗಳನ್ನು ಕುರಿತ ಪ್ರತ್ಯೇಕ ಅಧ್ಯಯನ ಕೈಗೊಳ್ಳಬೇಕು. ಆಗ ಶಾಂತಮುತ್ತಯ್ಯನ ಸಂಸ್ಕೃತಿಯ ಮೇಲೆ ಆದ ಪರಿಣಾಮವನ್ನು ಗುರುತಿಸಬಹುದು. ಕಂಥೆ ಅರ್ಪಣೆ ಮುಗಿಯುತ್ತಿದ್ದಂತೆ ಗುರುಗಳು ಹಾರಗಳನ್ನು ಧರಿಸುವ ಮೂಲಕ ಸ್ವಾಮಿಗೆ ಧಾರಣ ಮಾಡಿರುವ ಕರಿಯ ಕಂಥೆಯು ಕಾಣದಂತೆ ಮರೆಮಾಡುತ್ತಾರೆ. ಈ ಮೊದಲು ಇದೇ ಪುಣ್ಯ ಸ್ಥಳದಲ್ಲಿ ಸ್ವಾಮಿಗೆ ಧಾರಣೆ ಮಾಡಿದ್ದ ಹಳೆಯ ಭಿನ್ನವಾದ ಕಂಥೆಯನ್ನು ಮತ್ತು ನೂತನ ಕಂಥೆಯನ್ನು ಸಿದ್ಧ ಮಾಡಲು ತಂದು ಮಿಕ್ಕಿ ಉಳಿದ ಉಣ್ಣೆ ಇತ್ಯಾದಿ ವಸ್ತುಗಳನ್ನು ಈ ಬಾವಿಯಲ್ಲಿಯೇ ವಿಸರ್ಜಿಸುತ್ತಾರೆ. ಹೀಗೆ ರೇವಣ್ಣಸ್ವಾಮಿಗೆ ನೂತನವಾದ ಕಂಥಾಧಾರಣ ಕ್ರಿಯೆಯನ್ನು ಮಾಡುವಾಗ ಮಠದ ಒಡೆಯರುಗಳು ಮತ್ತು ಕಂಥೆಯನ್ನು ನೇಯುವವರು

ಮಾತ್ರ ತೆರೆಯ ಒಳಗಡೆ ಇರುವುದು ವಿಶೇಷ. ಕಂಥೆಯ ನೇಯ್ಗೆ, ಧಾರಣೆ ಇತ್ಯಾದಿ ಕ್ರಿಯೆಗಳು ಬೇರೆ ಯಾರಿಗೂ ಕಾಣದಂತೆ ತುಂಬಾ ನಿಗಾವಹಿಸುತ್ತಾರೆ. ಕಾರಣ ಸ್ವಾಮಿಗೆ ಅರ್ಪಿಸುವ 'ಕರಿಯ ಕಂಥೆ'ಯು ಒಂದು ಪವಿತ್ರವಾದ ವಸ್ತು. ಅದು ಸರ್ವರ ದೃಷ್ಟಿಗೆ ಬಿದ್ದರೆ ಅವರ ಪವಿತ್ರತೆಗೆ ಧಕ್ಕೆ ಉಂಟಾಗುತ್ತವೆ ಎಂಬ ಬಲವಾದ ನಂಬಿಕೆ ಇರುವುದರಿಂದ ಅದನ್ನು ಗುಪ್ತವಾಗಿಯೂ ಇಡುತ್ತಾರೆ.

ಹೀಗೆ ಈ ಎಲ್ಲ ಕ್ರಿಯೆಗಳು ಮುಗಿದ ಮೇಲೆ ಸುತ್ತಲೂ ಕಟ್ಟಿರುವ ಪರದೆಯನ್ನು ತೆಗೆಯುತ್ತಾರೆ. ನೂತನ ಕಂಥೆಯನ್ನು ಧರಿಸಿಕೊಂಡು ಅಲಂಕಾರಗೊಂಡಿರುವ ರೇವಣ್ಣಸ್ವಾಮಿಯನ್ನು ಭಾವುಕ ಭಕ್ತರು ಕಣ್ತುಂಬ ನೋಡಿ ಧನ್ಯತಾಭಾವವನ್ನು ಪಡೆಯುತ್ತಾರೆ. ಭಕ್ತರ ದರ್ಶನ ಮುಗಿದ ಮೇಲೆ ಗುರುಗಳು ಮಹಾಮಂಗಳಾರತಿಯನ್ನು ಮಾಡಿ ನೆರೆದಿರುವ ಭಕ್ತ ಸಮೂಹಕ್ಕೆ ಕರ್ಪೂರಾರತಿಯನ್ನು ಕೊಡುತ್ತಾರೆ. ಈ ಹೊತ್ತಿಗಾಗಲೇ ಗುರುಮಠದ ಸಾವಿರದವರು ಮೊದಲೇ ನಿಯೋಜಿಸಿದಂತೆ ಅನ್ನ ಸಂತರ್ಪಣೆಯ ವ್ಯವಸ್ಥೆಯನ್ನು ದೊಡ್ಡ ಪ್ರಮಾಣದಲ್ಲಿಯೇ ಮಾಡಿರುತ್ತಾರೆ. ಮೊದಲು ಗುರುಗಳು ಎಡೆ ಬಿಡಾರವನ್ನು ಮುಗಿಸಿದ ಮೇಲೆ ನಂತರ ನೆರೆದಿರುವ ಭಕ್ತ ಸಮೂಹದವರಿಗೂ, ಅಕ್ಕಪಕ್ಕದ ಹಳ್ಳಿಯ ಜನರಿಗೂ ಅನ್ನಸಂತರ್ಪಣೆಯಾಗುತ್ತದೆ. ಪ್ರಸಾದ ವ್ಯವಸ್ಥೆಯು ಮುಗಿದ ನಂತರ ರೇವಣ್ಣಸ್ವಾಮಿಯು, ಶ್ರೀ ಬೀರೇಶ್ವರ ಪಲ್ಲಕ್ಕಿಯನ್ನು ಹೊತ್ತು ಹರ್ಷೋದ್ಗಾರಗಳ ನಡುವೆ ಮರಳಿ ದೇವಾಲಯಗಳ ಹತ್ತಿರ ಬರುತ್ತಾರೆ. ಹೀಗೆ ಬರುವಾಗ ಕುರುಬ ಜನಾಂಗದ ಹೆಣ್ಣುಮಕ್ಕಳು ಶ್ರೀರೇವಣಸಿದ್ಧೇಶ್ವರನನ್ನು ಕುರಿತು ಕಥೆ, ಪವಾಡ ಗಳನ್ನು ಒಳಗೊಂಡ ಜಾನಪದ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿರುವುದು ಒಂದು ವಿಶೇಷ ಸಂಗತಿಯಾಗಿದೆ. ಈ ಹಾಡುಗಳಲ್ಲಿ ಕಲ್ಯಾಣ ಪಟ್ಟಣದಲ್ಲಿ ಇರುವ ಕುರುಬರನ್ನು ಹೀನಗುರುಬರು, ಜಿಡ್ಡುಗುರುಬರೆಂದು ಅವರ ಕೊಳಕುತನಕ್ಕೆ ಮೇಲುವರ್ಗದವರು ಬಹಿಷ್ಕಾರ ಹಾಕಿರುವ, ಹೀಗೆ ಬಹಿಷ್ಕಾರಕ್ಕೆ ಒಳಗಾಗಿರುವ ಕುರುಬರ ನಾಯಕತ್ವವನ್ನು ವಹಿಸಿಕೊಂಡು ಅವರನ್ನು ಮತ್ತೆ ಕಲ್ಯಾಣ ಪಟ್ಟಣವನ್ನು ಪ್ರವೇಶಿಸುವಂತೆ ಮಾಡಿ, ಕುರುಬರ ಗುರುತನವನ್ನು ರೇವಣಸಿದ್ಧೇಶ್ವರರು ವಹಿಸಿಕೊಂಡಿರುವ ಐತಿಹಾಸಿಕ ಸಂಗತಿಗಳು ಒಳಗೊಂಡಿರುವುದು ಗಮನಾರ್ಹವಾದ ಅಂಶವಾಗಿದೆ.[೨] ರೇವಣಸಿದ್ಧೇಶ್ವರರಿಗೆ ಕಂಥಾಧಾರಣೆ ಯನ್ನು ಮಾಡುತ್ತಿರುವ ಸಂದರ್ಭದಲ್ಲಿಯೇ ಇಂಥ ಹಾಡುಗಳನ್ನು ಹಾಡುತ್ತಿರುವುದರಿಂದ ರೇವಣಸಿದ್ಧೇ ಶ್ವರರು ಕುರುಬರ ಕುಲಕ್ಕೆ ಗುರುವಾಗಿ ನೇಮಕಗೊಂಡಿರುವುದರ ಸ್ಮರಣೆಗಾಗಿಯೇ ಈ ಆಚರಣೆಯು ರೂಢಿಯಲ್ಲಿ ಬಂದಿರಬಹುದೆನಿಸುತ್ತದೆ. ಈ ಆಚರಣೆಯಲ್ಲಿ ಆ 'ಗುಡಿಕಟ್ಟು' ವ್ಯವಸ್ಥೆಗೆ ಸೇರಿದ ಹಳ್ಳಿಗಳ ಭಕ್ತರು ತಪ್ಪದೆ ಬಂದಿರುತ್ತಾರೆ. ನೂರಾರು ಹಳ್ಳಿಗಳ ಕುರುಬರು, ಹತ್ತಾರು ಕುರುಬ 'ಕುಲ'(ಗೋತ್ರ)ದವರು ಸೇರಿರುತ್ತಾರೆ. ಹೊಸದುರ್ಗ ತಾಲೂಕು ಶ್ರೀರಾಂಪುರ ಗ್ರಾಮದ ರೇವಣಸಿದ್ಧ ಕಂಥೆ ಆಚರಣೆಯಲ್ಲಿ ಆ ಗುಡಿಕಟ್ಟು ವ್ಯವಸ್ಥೆಗೆ ಸೇರಿದ '೧೮೦'ಕ್ಕೂ ಹೆಚ್ಚು ಹಳ್ಳಿಗಳು ಸೇರುತ್ತವೆ. ಈ ಹಳ್ಳಿಗಳಿಗೆ ಒಡೆಯರು ತಪ್ಪದೆ ಮಾಹಿತಿಕೊಟ್ಟು ಕರೆಸಿಕೊಳ್ಳುತ್ತಾರೆ. ಜನರೂ ತಮ್ಮ ಕುಲದೈವದ ಜಾತ್ರೆಗೆ ತಪ್ಪದೆ ಹೋಗಬೇಕು ಅನ್ನುವ ಭಾವನೆಯನ್ನು ಹೊಂದಿದ್ದಾರೆ. ಜೊತೆಗೆ ತಪ್ಪಿಸಿದರೆ ನಮ್ಮ ಮನೆತನಕ್ಕೆ, ಕುಲಕ್ಕೆ ಒಳಿತಾಗುವುದಿಲ್ಲ ಅನ್ನುವ ಭಯ, ಆತಂಕ ಇವರಲ್ಲಿ ಕಾಡುತ್ತದೆ. ಹಾಗಾಗಿ ಯಾವುದೇ ಕುಲದವರು ತಪ್ಪದೇ ಈ ಆಚರಣೆ ಯಲ್ಲಿ ಭಾಗಿಯಾಗುತ್ತಾರೆ. ಇದು ಕುರುಬ ಕುಲದ ಸಮಷ್ಟಿ ಆಚರಣೆಯಂತೆ ಕಾಣುತ್ತದೆ.

ಹೀಗೆ ಹೊಸ ಕಂಥೆಯನ್ನು ಧರಿಸಿಕೊಂಡ ರೇವಣಸಿದ್ಧೇಶ್ವರರನ್ನು ಪಲ್ಲಕ್ಕಿ ಉತ್ಸವದಲ್ಲಿ ಕರೆದು ಕೊಂಡು ಬಂದು, ಮಠದ ಗದ್ದುಗೆಯಲ್ಲಿ ಪ್ರತಿಷ್ಠಾಪಿಸುತ್ತಾರೆ. ನಂತರ ಶ್ರದ್ಧಾಭಕ್ತಿಯಿಂದ ಸೇವೆ ಮಾಡಿದ ಕುಲಬಾಂಧವರಿಗೆ ಪ್ರಸಾದವನ್ನು ನೀಡುತ್ತಾರೆ. ಇದಕ್ಕೆ 'ಅರವಿ ತಳಿಗೆ' ನೀಡುವುದು ಎಂದು ಕರೆಯುತ್ತಾರೆ. ಇದನ್ನು ಮಠದ ಗೌಡರು ಮತ್ತು ಗುರುಗಳು ಸೇರಿಕೊಂಡು ನೀಡುತ್ತಾರೆ. ಪ್ರತಿಯೊಂದು ಬುಡಕಟ್ಟು ಗೌಡರಿಗೆ, ಕಂಥೆ ನೇಯ್ಗೆ ಮಾಡಿದವರಿಗೆ, ಹರಿವಾಣದವರಿಗೆ, ದೀವಟಿಗೆ ಹಿಡಿದವರಿಗೆ, ಮಂಗಳವಾದ್ಯ ದವರಿಗೆ ಹೀಗೆ ಜಾತ್ರೆಯಲ್ಲಿ ಭಾಗವಹಿಸಿ ತಮ್ಮ ಪಾಲಿನ ಸೇವೆ ಸಲ್ಲಿಸಿದ ಎಲ್ಲರಿಗೂ ಗಂಧಾಕ್ಷತೆಯನ್ನಿಟ್ಟು ಹಣ್ಣು ವೀಳ್ಯೆವನ್ನು ನೀಡಿ, ಹಾರವನ್ನು ಹಾಕಿ ಗೌರವಿಸಿ ಅರವಿಯನ್ನು (ಸಿಹಿ ಪದಾರ್ಥವನ್ನು ತುಂಬಿದ ಹರವಿ) ಹೊರಿಸಿ ಕಳಿಸುತ್ತಾರೆ. ಕೊನೆಯಲ್ಲಿ ಜಾತ್ರೆಯ ಆರಂಭದಲ್ಲಿ ಏರಿಸಿದ ಧರ್ಮ ಧ್ವಜಕ್ಕೆ ಪೂಜೆ ಯನ್ನು ಸಲ್ಲಿಸಿ ಅವರೋಹಣ ಮಾಡುತ್ತಾರೆ. ಕುಲದೈವವಾದ ಬೀರಲಿಂಗೇಶ್ವರ ಸ್ವಾಮಿಗೆ ಗುರುಮಠದ ಜಾತ್ರೆಗೆ ಬಂದು ಸಕ್ರಿಯವಾಗಿ ಪಾಲ್ಗೊಂಡಿರುವುದರ ನೆನಪಿಗಾಗಿ ಕಾಣಿಕೆಯನ್ನು ಕೊಟ್ಟು ಸಕಲ ಮಾರ್ಯದೆಯೊಂದಿಗೆ ಕಳುಹಿಸಿಕೊಡುತ್ತಾರೆ. ಈ ಸಂದರ್ಭದಲ್ಲಿ ಜಾತ್ರೆಯಲ್ಲಿ ಆದ ತಪ್ಪು-ಒಪ್ಪುಗಳನ್ನು ಕ್ಷಮಿಸುವಂತೆ ಜಾತ್ರೆಗೆ ಆಹ್ವಾನ ಮಾಡಿದ ಮಠದವರು ಬೇಡಿಕೊಳ್ಳುತ್ತಾರೆ. ಇಲ್ಲಿಗೆ ಶ್ರೀಗುರು ರೇವಣ ಸಿದ್ಧೇಶ್ವರರ 'ಕಂಥಾಧಾರಣ' ಆಚರಣೆಯು ವಿಧಿವತ್ತಾಗಿ ಮುಕ್ತಾಯವಾಗುತ್ತದೆ.[18]

ಇಂಥ ಕಂಥೆ ಸೇವೆಯ ಆಚರಣೆಯನ್ನು ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಮಾಡುವುದು ಕಂಡು ಬರುತ್ತದೆ. ರೇವಣಸಿದ್ಧೇಶ್ವರರಿಗೆ ಧರಿಸಿದ ಕಂಥೆಯು ಭಿನ್ನವಾದರೆ ಮತ್ತೊಂದು ಹೊಸ ಕಂಥೆಯನ್ನು ಅರ್ಪಿಸುವ ಏರ್ಪಾಟನ್ನು ಮಾಡುತ್ತಾರೆ. ಇದಕ್ಕೆ ತಗಲುವ ಖರ್ಚುವೆಚ್ಚಗಳು ಕೂಡ ತುಂಬ ಅಧಿಕವಾಗಿ ರುತ್ತವೆ. ಅದನ್ನೆಲ್ಲ ಕುಲಬಾಂಧವರು ನಿರ್ವಹಿಸುತ್ತಾರೆ. ಇಂಥ ಕಂಥೆ ಸೇವೆಯ ಆಚರಣೆಯು ಮುದ್ದೇಬಿ ಹಾಳ ತಾಲೂಕಿನ ಸರೂರು, ಶಹಪೂರ ತಾಲೂಕಿನ ಶಿರವಾಳ ರೇವಣಸಿದ್ಧೇಶ್ವರರಿಗೆ ನಿಯಮಿತವಾಗಿ ಆಚರಿಸಿಕೊಂಡು ಬಂದಿರುವುದು ಕಂಡು ಬರುತ್ತದೆ. ಉಳಿದಂತೆ ಕೆಲವು ಕಡೆ ಇದನ್ನು ಆಚರಿಸುವುದಕ್ಕೆ ತಗಲುವ ಖರ್ಚು ವೆಚ್ಚವನ್ನು ನಿಭಾಯಿಸುವ ಸಾಮರ್ಥ್ಯ ಇಲ್ಲದೇ ಇರುವುದರಿಂದ ಈ ಆಚರಣೆಯನ್ನು ಆಚರಿಸುವುದಿಲ್ಲವೆಂದು ಕೆಲವು ಮಠದ ಒಡೆಯರುಗಳು ಹೇಳುತ್ತಾರೆ. ಉತ್ತರ ಕರ್ನಾಟಕ ಭಾಗದಲ್ಲಿ ಯಂತೂ ಈ ಆಚರಣೆಯು ಕಂಡು ಬರುವುದೇ ಇಲ್ಲ. ಆದರೆ ಕರ್ನಾಟಕ ಮಹಾರಾಷ್ಟ್ರದ ಗಡಿನಾಡು ಪ್ರದೇಶದಲ್ಲಿರುವ ಪಾಂಡುರಂಗ ವಿಠಲನಿಗೆ ಈ ಆಚರಣೆಯನ್ನು ಮಾಡಲಾಗುತ್ತದೆ ಎಂದು ಡಾ. ಚಿಂತಾಮಣಿ ಢೇರೆ ಅವರು ಶ್ರೀ ವಿಠಲ ಒಂದು ಮಹಾಸಮನ್ವಯದಲ್ಲಿ ಚರ್ಚಿಸಿದ್ದಾರೆ.

ಈ ರೀತಿಯ ಕಂಥೆ ಸೇವೆಯು ಕುರುಬರ ಗುರು ಪರಂಪರೆಯ ಮತ್ತೊಬ್ಬ ಮಹಾಪುರುಷನಾದ ಶ್ರೀ ಸಿದ್ಧರಾಮೇಶ್ವರನಿಗೂ ಅರ್ಪಿಸುವ ಪದ್ಧತಿ ರೂಢಿಯಲ್ಲಿದೆ. ಉದಾಹರಣೆಗೆ:- ಶಿರವಾಳ ಸಿದ್ಧರಾಮೇ ಶ್ವರನಿಗೂ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಕಂಥೆ ಸೇವೆ ಮಾಡುವ ಪದ್ಧತಿ ಇರುವುದಾಗಿ ಅಲ್ಲಿಯ ಅರ್ಚಕರು ಹೇಳುತ್ತಾರೆ. ಈ ದೇವಾಲಯಗಳಲ್ಲಿಯೂ ಕಂಥೆಯನ್ನು ನೇಯ್ದು ಅತ್ಯಂತ ಸಂಭ್ರಮದಿಂದ ಅರ್ಪಿಸುವವರು ಕುರುಬ ಜನಾಂಗದವರೇ ಆಗಿರುವುದು ಮತ್ತೊಂದು ವಿಶೇಷ. ಇದು ಈ ಜನಾಂಗ

ದವರಿಗೂ ಆ ದೈವಕ್ಕೂ ಇರುವ ಕರುಳುಬಳ್ಳಿ ಸಂಬಂಧವನ್ನು ಸೂಚಿಸುವುದು ಎಂದರೆ ತಪ್ಪಾಗಲಾರದು. ಕೆಲವು ಕಡೆ ಸಿದ್ಧರಾಮ ದೇವಾಲಯದ ಅರ್ಚಕರಾಗಿ ಮತ್ತು ದೇವಾಲಯದ ಹಕ್ಕು ಲಿಂಗಾಯತರು ಹೊಂದಿದ್ದರೂ ಆ ದೇವಾಲಯಗಳಲ್ಲಿ ಕಂಥೆ ಅರ್ಪಿಸುವ ಹಕ್ಕು ಕುರುಬರಿಗೆ ಇದೆ. ಅಲ್ಲಿ ಶಾಂತ ಒಡೆಯರು ಭಾಗಿಯಾಗುತ್ತಾರೆ. ಇವರನ್ನು ಲಿಂಗಾಯತರು ಸಕಲ ಗೌರವಗಳಿಂದ ಬರಮಾಡಿಕೊಳ್ಳುತ್ತಾರೆ. ಇದು ಶಾಂತ ಒಡೆಯರು ಹೊಂದಿರುವ ಹಕ್ಕನ್ನು ತಿಳಿಸುತ್ತದೆ. ಉದಾಹರಣೆಗೆ :- ತರೀಕೆರೆ ತಾಲೂಕು ಸೊಲ್ಲಾಪುರದ ಸಿದ್ಧರಾಮ ದೇವಾಲಯದ ಹಕ್ಕನ್ನು ಲಿಂಗಾಯತರು ಹೊಂದಿದ್ದಾರೆ. ಕುಲದೈವವನ್ನಾಗಿ ಮಾಡಿಕೊಂಡು ಆರಾಧಿಸುತ್ತಿದ್ದಾರೆ. ಆದರೆ ಕಂಥೆ ಸೇವೆ ಸಂದರ್ಭದಲ್ಲಿ ಕುರುಬರ ಆರಾಧ್ಯದೈವಗಳನ್ನು ತಪ್ಪದೇ, ಬರಮಾಡಿಕೊಳ್ಳುತ್ತಾರೆ. ಈ 'ಸಂಯುಕ್ತ ಸಂಸ್ಕೃತಿ' ಗಮನ ಸೆಳೆಯುತ್ತದೆ. ಎರಡು ಸಮುದಾಯ ಗಳಲ್ಲಿರುವ ಹೊಂದಾಣಿಕೆಯನ್ನು ತಿಳಿಸುತ್ತದೆ. ಅಲ್ಲದೇ ಎರಡು ಸಮುದಾಯಗಳಲ್ಲಿ ಶಾಂತಮುತ್ತಯ್ಯನ ಸಂಸ್ಕೃತಿಗೆ ಇರುವ ಗೌರವವನ್ನು ತಿಳಿಸುತ್ತದೆ.

### ೪.೩.೨. ಒಡೆಯರ ಹೇಳಿಕೆಗಳು

ಪ್ರಕೃತಿಯ ಒಡಲಲ್ಲಿಯೇ ಸದಾಕಾಲ ತಮ್ಮ ಕುರಿ ಮರಿಗಳನ್ನು ಮೇಯಿಸುತ್ತ ಬದುಕುತ್ತಿರುವ ಕುರುಬರಿಗೆ ಪ್ರಕೃತಿಯ ಆಗು-ಹೋಗುಗಳ ಬಗ್ಗೆ ಇರುವ ಅನುಭವ ಸಹಜವಾಗಿ ಬಂದದ್ದೆನಿಸುತ್ತದೆ. ಪ್ರಕೃತಿಯಲ್ಲಿ ಆಗುವ ಹವಾಮಾನದ ವೈಪರೀತ್ಯ. ಮಳೆ, ಬೆಳೆಯ ಬಗ್ಗೆ ಕುರುಬನಿಗಿರುವ ಅನುಭವವು ಎಷ್ಟು ನಿಖರವಾದದ್ದು ಎಂಬುದನ್ನು ಕುರಿತು ಹೇಳುವ ಕಥೆಯೊಂದು ಡೊಳ್ಳಿನ ಹಾಡುಗಳಲ್ಲಿ ದೊರೆಯು ತ್ತದೆ. ಅದು ಹೀಗಿದೆ. "ಒಮ್ಮೆ ಶಿವಪಾರ್ವತಿಯರು ಹೊರಟಿರುವ ಸಂದರ್ಭದಲ್ಲಿ ಕುರುಬ ವೀರನು ಕುರಿ ಹಿಂಡನ್ನು ಅಟ್ಟಿಕೊಂಡು ಬಂದು ಹಳ್ಳದ ದಂಡೆಗೆ ಬರುವನು. ಅಲ್ಲಿಯ ನೀರು, ನೆರಳು ಕಂಡು ತನ್ನ ಕುರಿಗಳಿಗೆ ದಡ್ಡಿ ಹಾಕಲು ತಕ್ಕ ಸ್ಥಳವೆಂದು ಬಗೆದು ದಡ್ಡಿ ಹಾಕ ಹತ್ತುವನು. ಅತ್ತ ಕಡೆಯಿಂದ ಶಿವಪಾರ್ವತಿ ಬಂದು ಕೇಳುತ್ತಾರೆ. 'ಹಳ್ಳದಲ್ಲೇಕೆ ದಡ್ಡಿ ಹಾಕುತ್ತಿಯಾ? ಹಳ್ಳದ ತೊಂದರೆಯೇನು ಆಗುವುದಿಲ್ಲವೆ? ಮಳೆ ಆಗಿಬಿಟ್ಟರೆ ಹಳ್ಳ ತುಂಬಿ ಬರುವುದಿಲ್ಲವೇ? ಎಂದು ಪ್ರಶ್ನಿಸಿದರು. 'ಮಳೆ ಹೋಯ್ತು ಮೂರು ತಿಂಗಳ ತನ್ನ ನಾಡಿಗೆ' ಕುರುಬನ ಹೇಳಿಕೆ. ಅಲ್ಲಿ ನಿಲ್ಲದೆ ಆ ದೇವ ದಂಪತಿಗಳು ನೇರವಾಗಿ ವರುಣ ಲೋಕಕ್ಕೆ ತೆರಳಿದರು. 'ಮಳೆರಾಯನನ್ನು ಈಗಲೇ ಭೂಮಿಗೆ ಕಳಿಸಿಕೊಡು' ಎಂದರು ವರುಣನಿಗೆ. ವರುಣನು ವಿನಯಿಸಿದನು 'ಆ ಮಳೆರಾಯನನ್ನು ಬೇರೆ ನಾಡಿಗೆ ಕಳಿಸಿದ್ದೇನೆ. ಅವನು ಬರುವುದು ಮೂರು ತಿಂಗಳು ಕಳೆದ ಬಳಿಕ' ಎನ್ನುತ್ತಾನೆ. ಶಿವಪಾರ್ವತಿಯರು ನಿರುತ್ತರಾದರು. ಆ ಮಾತು ಕೇಳಿ ಅವರ ಮುಖ ಬಾಡಿದವು. ಕೈಲಾಸಕ್ಕೆ ತೆರಳಿದರು. ಹಳ್ಳದಲ್ಲಿ ವೀರನ ದಡ್ಡಿ. ಹಳ್ಳದ ದಂಡೆಯಲ್ಲಿ ಕುರಿಗಳ ಬೀಡು. ಹಳ್ಳದ ನೀರು ಕುಡಿಯುತ್ತ ಕುರಿಗಳು ಮೂರು ತಿಂಗಳು ಕಳೆದವು. ವೀರನು ಬೇರೊಂದೆಡೆಯಲ್ಲಿ ದಡ್ಡಿಯನು ಅಣಿಗೊಳಿಸತೊಡಗಿದನು. 'ಬೀರಾ ದಡ್ಡಿಯನ್ನು ಕಿತ್ತಿದೆಯಲ್ಲ ಏಕೆ?' ಎಂದು ಕೇಳಿದರು ಅತ್ತಿಂದ ಬಂದ ಶಿವಪಾರ್ವತಿಯರು. 'ಮಳೆರಾಜ ಬಂದಿರುವನಲ್ಲವೆ ನಮ್ಮ ನಾಡಿಗೆ' ವೀರನ ಮರುನುಡಿ. ಎಷ್ಟು ಸೊಕ್ಕು ಈ ಕುರುಬನಿಗೆ, ಮಳೆ ಬಂದೇ ತೀರುವುದೆಂದು ಎಷ್ಟು ಸ್ಪಷ್ಟವಾಗಿ

ಹೇಳುವನಲ್ಲ. ಉತ್ತರ ಮೇಲಿಂದ ಹೀಗೆ ಹೇಳುತ್ತಾನೆ? ಎಂದುಕೊಳ್ಳುತ್ತ ಆ ದೇವ ದಂಪತಿಗಳು ನೇರವಾಗಿ ಸ್ವರ್ಗಲೋಕಕ್ಕೆ ತೆರಳಿ ವರುಣನ ಬಳಿಗೆ ಹೋಗಿ ಎಂದು ಬೇಡುತ್ತಾರೆ. 'ಮಳೆರಾಯನನ್ನು ಮರಳಿ ಕರೆಯಿಸು. 'ನೀವು ಹೇಳಿದಂತೆ ಇಂದೇ ಅವನನ್ನು ಅತ್ತ ಕಳಿಸಿದ್ದೇನೆ' ಮೋಡಗಳು ಮುಂದೆ ಮುಂದೆ ಸಿಡಿಲು ಮಿಂಚು ಹಿಂದೆ ಹಿಂದೆ ಹೋಗಿವೆ. ನನ್ನ ಕೈಯಲ್ಲೇನಿದೆ? ಕೊಟ್ಟ ಹುಕುಮು ಅವನ ಕೈಯಲ್ಲಿದೆ ಎಂದು ವರುಣನ್ನು ಬಿನ್ನಯಿಸಿದನು. ನಾವಿಂದು ಸೋತೆವು ಕುರುಬನಿಗೆ ಅಂದುಕೊಂಡರು ಶಿವ-ಪಾರ್ವತಿಯರು.[೧೪] ಈ ಕತೆಯ ತಾತ್ಪರ್ಯಾರ್ಥವಿಷ್ಟೆ. ಪ್ರಕೃತಿಯ ಕೂಸಾದ ಕುರುಬರಿಗೆ ಈ ಪ್ರಕೃತಿ ಯಲ್ಲಿ ಸಂಭವಿಸುವ ಘಟನೆಗಳು ವೈಪರೀತ್ಯಗಳು, ಹವಾಮಾನ, ಮಳೆ ಬೆಳೆ ಇತ್ಯಾದಿಗಳ ಬಗ್ಗೆ ಇರುವ ಜ್ಞಾನವು ಸಹಜವಾಗಿ ಬಂದಿರುವಂಥದ್ದು ಎಂಬುದು ಈ ಜೀವನಾನುಭವದ ಹಿನ್ನೆಲೆಯಲ್ಲಿ ಅದನ್ನು ಕುರಿತು ನಿಖರವಾಗಿ ಹೇಳಬಲ್ಲವರಾಗಿದ್ದರು. ಅದಕ್ಕಾಗಿ 'ಕುರುಬರು ಕಂಬಳಿ ಬೀಸಿದರೆ ಮಳೆ ಬರುತ್ತದೆ' ಎಂಬ ಮಾತು ನಮ್ಮಲ್ಲಿ ಪ್ರಚಲಿತದಲ್ಲಿರುವುದು.

ಉದಾ:- ಮಳೆ ಬರುವ ಸಂಕೇತಕ್ಕೆ -

೧. ಕಪ್ಪೆ ಎಡಬಿಡದೆ ವಟಗುಟ್ಟಿದರೆ

೨. ಕುರಿಗಳು ಒಂದಕ್ಕೊಂದು ಮುದ್ದೆಯಾಗಿ ಹೊಂದಿ ನಿಂತರೆ

೩. ಮಿಡತೆಗಳು - ಮಳೆಹುಳಗಳು ಎದ್ದು ಆಡಿದರೆ

೪. ಗಾಳಿಯ ವಿರುದ್ಧ ದಿಕ್ಕಿನಿಂದ ಮೋಡಗಳು ಚಲಿಸಿದರೆ

೫. ಕಲಬುರ್ಗಿ ಮೂತಿ ಮಿಂಚ ಮಿಂಚಿದರೆ

ಹೀಗೆ ಅನುಭವದ ಪಟ್ಟಿ ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತ ಬೆಳೆಯುತ್ತ ಹೋಗುತ್ತದೆ. ಇದ್ದ ಅನುಭವಗಳೂ ಹೌದು, ನಂಬಿಕೆಗಳೂ ಹೌದು 'ಕಲುಬುರ್ಗಿ ಮಿಂಚ ಮಿಂಚಿದರ ಕರಕಟ್ಟೂರದ್ರಾಗ ಮಳಿ ಬರತದ' ಎಂಬ ಹೇಳಿಕೆ ಬಿಜಾಪುರ ಪ್ರದೇಶದ ಭಾಗದಲ್ಲಿ ಪ್ರಚಲಿತವಿದೆ.[೧೫] ಹೀಗೆ ಪರಂಪರಾಗತ ವಾಗಿ ಪ್ರಕೃತಿಯ ಆಗು-ಹೋಗುಗಳ ಬಗ್ಗೆ ಅನುಭವವುಳ್ಳವರೂ, ಸ್ವಭಾವತಃ ಮುಗ್ಧರೂ, ಅಪಾರ ದೈವಭಕ್ತರೂ ಆದ ಕುರುಬರು ಆಡಿದ ಮಾತಿಗೆ ಒಂದು ರೀತಿ ದೈವತ್ವದ ನೆಲೆ ಪ್ರಾಪ್ತವಾಗಿರಬೇಕೆನಿಸುತ್ತದೆ. ಇಂಥ ಅವರ ಮಾತುಗಳೇ ಹೇಳಿಕೆಗಳಾಗಿ ಮಾರ್ಪಟ್ಟಿರಬೇಕು. ಇಂಥ ಕುರುಬ ಒಡೆಯರ ಹೇಳಿಕೆಗಳಿಗೆ ಉತ್ತರ ಕರ್ನಾಟಕ ಭಾಗದಲ್ಲಿ ಅದರಲ್ಲಿಯೂ ವಿಜಾಪುರ, ಗುಲಬರ್ಗ, ಬೆಳಗಾಂ, ಜಿಲ್ಲೆಗಳಲ್ಲಿ ವಿಶೇಷ ವಾದ ಜನ ಮನ್ನಣೆ ಇರುವುದು ಕಂಡುಬರುತ್ತದೆ. ಈ ಭಾಗದ ರೈತಾಪಿ ಜನರು ಒಡೆಯರುಗಳು ಹೇಳುವ ಹೇಳಿಕೆಗಳು ಅಕ್ಷರಶಃ ಸತ್ಯವಾಗುತ್ತವೆ ಎಂದು ನಂಬುತ್ತಾರೆ. ಉತ್ತರ ಕರ್ನಾಟಕದಲ್ಲಿ ಕುರುಬರ ಪ್ರಮುಖ ಪುಣ್ಯಸ್ಥಳಗಳಾದ ಅರಕೆರೆ, ಮಕಣಾಪುರ, ಸರೂರು, ಶಿರವಾಳ ಮುಂತಾದ ಸ್ಥಳಗಳಲ್ಲಿಯ ಒಡೆಯರು ಹೇಳುವ ಹೇಳಿಕೆಗಳು ತುಂಬ ಪ್ರಸಿದ್ಧವಾಗಿದೆ. ಈ ಪ್ರದೇಶಗಳಲ್ಲಿ ಯುಗಾದಿ ಮಹಾಶಿವರಾತ್ರಿ

ದೀಪಾವಳಿ, ಛಟ್ಟಿಅಮವಾಸ್ಯೆ, ಬಾದಾಮಿ ಅಮವಾಸ್ಯೆಯ ಸಂಧರ್ಭದಲ್ಲಿ ರೇವಣ್ಣಸಿದ್ಧೇಶ್ವರ, ಅಮೋಘ ಸಿದ್ಧೇಶ್ವರ, ಹಬ್ಬ ಉತ್ಸವಗಳನ್ನು ಅತ್ಯಂತ ಅದ್ದೂರಿಯಾಗಿ ಆಚರಿಸುತ್ತಾರೆ. ಈ ಹಬ್ಬಗಳ ಸಂದರ್ಭದಲ್ಲಿ ಡೊಳ್ಳಿನ ವಾಲಗ ನಡೆಯುತ್ತದೆ. ದೇವರ ಉತ್ಸವ ಮೂರ್ತಿಗಳನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ಗಂಗಾ ಸ್ನಾನಕ್ಕೆ ಹೋಗುತ್ತಾರೆ. ಪಲ್ಲಕ್ಕಿ, ಉತ್ಸವ ಮೆರವಣಿಗೆಗಳನ್ನು ಮಾಡುತ್ತಾರೆ. ಪ್ರಸಾದ ವಿತರಣೆಯೂ ನಡೆಯುತ್ತವೆ. ದೇವರ ಈ ಉತ್ಸವದ ಸಂದರ್ಭದಲ್ಲಿ ದೇವರ ಪೂಜಾರಿ ಅಥವಾ ಒಡೆಯರುಗಳ ಮೈಯಲ್ಲಿ ದೇವರ ಪ್ರವೇಶವಾಗುತ್ತದೆ. ಇಲ್ಲವೆ ಅವನೇ ದೈವೀಶಕ್ತಿಯಲ್ಲಿ ತಾದಾತ್ಮ್ಯ ಹೊಂದುತ್ತಾನೆ. ಹೀಗೆ ತಾದಾತ್ಮ್ಯ ಹೊಂದಲು ಆ ಸಂದರ್ಭದಲ್ಲಿಯ ಪರಿಸರವೂ ಕಾರಣವಾಗುತ್ತದೆ. ಒಂದೇ ಸಮನೆ ಡೊಳ್ಳಿನ ಬಡಿತ ಪ್ರಾರಂಭವಾಗಿ ಅದರ ಸದ್ದಿನ ಧ್ವನಿ ತಾರಕಕ್ಕೆ ಮುಟ್ಟುತ್ತದೆ. ಡೊಳ್ಳನ್ನು ಬಡಿಯುವು ದರಿಂದ ಹೊರಹೊಮ್ಮುವ ನಾದ ಆತನನ್ನು ಉನ್ಮಾದಗೊಳ್ಳುವಂತೆ ಪ್ರೇರಣೆ ನೀಡುತ್ತದೆ. ಅಲ್ಲಿ ಒಂದು ರೀತಿಯ ದೈವೀ ಆವರಣ ಉಂಟಾಗುತ್ತದೆ.''ಆಗ ಪೂಜಾರಿಯೂ ದೈಹಿಕವಾಗಿ ನೆಲದ ಮೇಲಿದ್ದರೂ ಭಾವ ಭಗವಂತನಲ್ಲಿ ಲೀನವಾಗಿ ದೈವೀ ಸ್ಫೂರ್ತಿಗೆ (Divincspirit) ಒಳಗಾಗುತ್ತಾನೆ. ಅವನು ತನಗಾದ ನೈಸರ್ಗಿಕ ಅಧ್ಯಯನದ ಫಲವನ್ನು ಬೆಡಗಿನ ಮಾತಿನಲ್ಲಿ ಒಂದು ರೀತಿಯ ಒಗಟಿನೊಂದಿಗೆ ಉಚ್ಚರಿಸುತ್ತಾನೆ. ಅವು ದೇವರ ಹೇಳಿಕೆಗಳು ಎಂಬುದಾಗಿ ಕರೆಸಿಕೊಳ್ಳುತ್ತವೆ. ಈ ಹೇಳಿಕೆಗಳು ಕಾವ್ಯಭಾಷೆ ಯನ್ನು ಹೊತ್ತಿರುತ್ತದೆ.''

ಇಂಥ ಕೆಲವು ಹೇಳಿಕೆಗಳನ್ನು ವಿಜಾಪುರ ಜಿಲ್ಲೆಯ ಸರೂರು ಗುಲಬರ್ಗಾ ಜಿಲ್ಲೆ ಶಹಪುರ ತಾ. ಶಿರವಾಳ ರೇವಣ್ಣಸಿದ್ಧೇಶ್ವರ ಶಾಂತಮುತ್ತಯ್ಯನ ಮಹಾಶಿವರಾತ್ರಿ ಮಹಾನವಮಿ ಜಾತ್ರೆಯಲ್ಲಿ ಆಗಿರುವ ಹೇಳಿಕೆಗಳಲ್ಲಿ ಕಾಲವನ್ನು ನಿದರ್ಶನಕ್ಕಾಗಿ ಇಲ್ಲಿ ನೋಡಬಹುದು.

೧. **ಸೂರೂರು ಮಲ್ಲಿಕಾರ್ಜುನ ಒಡೆಯರ್** : ಅರಿದ್ರೀಗಿ ಕೂರಿಗೆ ಸಾಗ ಮಾಡಬೇಕು ಅನ್ನುದುರಾಗ ಇದಿಮಾಯಿ ಇದರಿಗಿ ಬಂದಳು, ಬೂತ್ಯಾನ ಹಚ್ಚಿ ಬೈಲ ಮಾಡೀನಿ "ಗಿಡದಾಗ ಹಣ್ಣಾಯಿತು ಗಿಳಿ ಬಾಯಿಗೆ ಹುಣ್ಣ ಹುಟ್ಟ ತಲೆ" ಗಾಣಮಿಣಿ.

೨. **ಸಿದ್ಧಯ್ಯ ಒಡೆಯರು** : ಹಿಂಗಾರಿ ನಾಡಕ ಹಿಂಗಾರಿ, ಮುಂಗಾರಿ ನಾಡಕ ಮುಂಗಾರಿ ಕಾಟಾ ಮಾಡುದುರಾಗ ಜೋಡು ನುಚ್ಚಿನ ಕಟ್ಟಿ ಹಾಕಿ ನೆಲೆ ಗಾಣಮಿಣಿ.

೩. ಎಲೆ ತಿರುಗಲಿಕ್ಕೆ ರಾಮನ ಬಾಣಲ್ಲ, ಹಾರಲಿಕ್ಕೆ ಕಾಮನ ಬೂದಿ ಅಲ್ಲ. ಮಿರಗಾ ಮಿಂಚಿತು. ಆರಿದ್ರ ಕೂಲಿಗೆ ಸಾಗ ಮಾಡಾದ್ರಾಗ ಸಂಪೂರ್ಣ ತಡಬಿತ್ತು. ಪುಷ್ಯನುಪುಣ್ಯವರಸು, ಛಪ್ಪನ್ನಾಡಿಗೆ ಸಂಪೂರ್ಣ ಮಾಡೀನಿ. ರೋಹಿಣಿ ಮೃಗಶಿರ ಮಳೆ ಪ್ರಾರಂಭವಾಗುವ ಹೇಳಿಕೆ.

೪. ಯಾಂವ ಕೇಳಾಂವ, ಅಂಗೈ ಹಿಡಿದು ಕೇಳಬ್ಯಾಡ ಮುಂಗೈ ಹಿಡಿದು ಕೇಳು.

೫. ಸಿದ್ಧ ಹೇಳಿದ ಮಾತು ಕಲ್ಲ ಅರಿಮ್ಯಾಲ ಮ್ಯಾಣದ ಗೂಟ ಬಡಿದ್ಹಾಂಗ.

೬. ಕೂರಿಗಿ ಸಾಗ ಮಾಡೂದರಾಗ ಇದಿಮಾಯಿ ರಂಡಿ ಇದಿರಿಗಿ ಬಂದಳು, ಭೂತ್ಯಾನ ಹಚ್ಚಿ ಬಯಲು ಮಾಡೀನಿ.

೭. ಕರಿತಲಿ ಮಾನವನಿಗಿ ಎಷ್ಟು ಹೇಳಿದರೂ ಸಮಾಧಾನ ಆಗಲಿಲ್ಲ. ಬಸವನ ಚಿಕ್ಕಾದಸರೀಗಿ ಹರಿದೀನಿ ಎಂಬ ಮುಂತಾದ ಮಾತುಗಳು, ಹೇಳಿಕೆಗಳ 'ಶೈಲಿ' ಎಂದೇ ಭಾವಿಸಬೇಕಾಗುತ್ತದೆ.

ಸಾಮಾನ್ಯವಾಗಿ ಒಡೆಯರುಗಳು ಮಾಡುವ ಹೇಳಿಕೆಗಳು ಇದೇ ರೀತಿಯಲ್ಲಿ ಇರುತ್ತವೆ. ಆದರೆ ಹೇಳಿಕೆಗಳು ಮಾಡುವ ರೀತಿ (ವಿಧಾನ) ಮಾತ್ರ ತುಂಬಾ ವಿಶಿಷ್ಟ ರೀತಿಯದ್ದಾಗಿದೆ. ಸರೂರು ರೇವಣ ಸಿದ್ದೇಶ್ವರ ಅರಕೇರಿ ಅಮೋಘಸಿದ್ಧೇಶ್ವರ ಜಾತ್ರೆ ಉತ್ಸವಗಳು ಮಹಾಶಿವರಾತ್ರಿ ಮಹಾನವಮಿ ಛಟ್ಟಿ ಅಮವಾಸ್ಯೆ ಹಾಗೂ ಬಾದಾಮಿ ಅಮವಾಸ್ಯೆಯ ಸಂದರ್ಭದಲ್ಲಿ ನಡೆಯುವುದು ವಾಡಿಕೆಯಾಗಿದೆ. ಬಾದಾಮಿ ಅಮವಾಸ್ಯೆಗೆ ಐದು ದಿವಸ ಮುಂಚೆ ದೇವರನ್ನು ಹಸೆಕಟ್ಟೆಗೆ ಕೂಡಿಸುತ್ತಾರೆ. ಅಮವಾಸ್ಯೆಯ ದಿವಸ ದೇವರಿಗೆ ವಿಜಾಪೂರದಿಂದ ಹೂವುಗಳು ಬರುತ್ತವೆ. ಈ ಹೂವುಗಳನ್ನು ದೇವಾಲಯದ ಒಡೆಯರುಗಳು ಮೈಲಿಗೆ ಉಂಟಾಗದಂತೆ ತಲೆಯ ಮೇಲೆ ಹೊತ್ತುಕೊಂಡು ಬರಿಗಾಲಿನಿಂದ ನಡೆದುಕೊಂಡು ಬರುವುದು ಪದ್ಧತಿಯಾಗಿದೆ. ಹೀಗೆ ತಂದಿರುವ ಹೂವುಗಳನ್ನು ಹೊರಗಿನ ಮಠದಲ್ಲಿ ಗದ್ದುಗೆ ಮಾಡಿರುತ್ತಾರೆ. ಅಮವಾಸ್ಯೆಯ ದಿವಸ ರಾತ್ರಿ ಒಂಬತ್ತು ಗಂಟೆಗೆ ಸರಿಯಾಗಿ ಮಠದ ಒಡೆಯರುಗಳು ಮಡಿ ಬಟ್ಟೆಯನ್ನು ಉಟ್ಟು, ಡೊಳ್ಳು, ಕಹಳೆ, ಹಲಗೆ, ಕರಡಿಮಜಲು ಮುಂತಾದ ವಾದ್ಯ ವೈಭವಗಳೊಂದಿಗೆ ಹೂವನ್ನು ತರುವುದಕ್ಕೆ ಹೊರಗಿನ ಮಠಕ್ಕೆ ಹೋಗುತ್ತಾರೆ. ಅಲ್ಲಿಂದ ಹೂವನ್ನು ತೆಗೆದುಕೊಂಡು ರಾತ್ರಿ ಎರಡು ಗಂಟೆಗೆ ಊರಲ್ಲಿರುವ ದೇವಸ್ಥಾನ ಹತ್ತಿರಕ್ಕೆ ಬರುತ್ತಾರೆ. ತಂದಿರುವ ಹೂವುಗಳನ್ನು ಹಸೆಯಲ್ಲಿ ಇರುವ ದೇವರಿಗೆ ಅರ್ಪಿಸಿ ಪೂಜೆಯನ್ನು ಮಾಡುತ್ತಾರೆ. ಈ ಪೂಜಾವಿಧಿ ಮುಗಿಯುವುದರೊಳಗಾಗಿ ಸರಿಯಾಗಿ ಬೆಳಗಿನ ನಾಲ್ಕು ಗಂಟೆಯಾಗುತ್ತದೆ. ನಂತರ ದೇವರ ಒಡೆಯರುಗಳು ಉಡುಗೆಯನ್ನು ಉಟ್ಟುಕೊಂಡು ಅಮೋಘಸಿದ್ಧೇಶ್ವರ ಮುಖವಾಡಗಳನ್ನು ಕಟ್ಟಿಕೊಳ್ಳುತ್ತಾರೆ. ಡೊಳ್ಳಿನ ವಾಲಗದಲ್ಲಿ ದೇವಾಲಯದ ಮುಂದುಗಡೆಯಿರುವ ವಿಸ್ತಾರವಾದ ಆವರಣಕ್ಕೆ ಬರುತ್ತಾರೆ. ಅಲ್ಲಿ ಡೊಳ್ಳಿನ ವಾಲಗದ ಸದ್ದಿನಲ್ಲಿ ದೇವರಾಡುತ್ತಾರೆ. ದೇವರಾಡುವುದು ಎಂದರೆ ಡೊಳ್ಳಿನ ತಾರಕ ಸ್ವರದ ನಾದದಲ್ಲಿ ವಿಶಿಷ್ಟ ರೀತಿಯ ಲಯಗತಿಯಲ್ಲಿ ಕುಣಿಯುವುದು. ಇದನ್ನು ಶಿವನನ್ನು ಕರೆಯುವ ಆಚರಣೆ ಎಂದು ಕರೆಯುವರು. 'ವಾಲಗ' ಮಾಡಿದರೆ ಶಿವ ತಮ್ಮ ಹತ್ತಿರ ಬರುತ್ತಾನೆ ಅನ್ನುವ ನಂಬಿಕೆ ಕುರುಬರಲ್ಲಿದೆ. ಡೊಳ್ಳು ಬಡಿಯುವವರು ತಮ್ಮನ್ನು ಶಿವನ ಸೇವಕರು ಎಂದು ಕರೆದುಕೊಳ್ಳುತ್ತಾರೆ. ಹೀಗೆ ಕುಣಿಯುವ ದೃಶ್ಯವು ನೋಡುವವರ ಕಣ್ಮನ ಸೆಳೆಯುವಂತೆ ಇರುತ್ತದೆ. ಇದನ್ನು ನೋಡುವುದಕ್ಕೆ ಒಡೆಯರ ಹೇಳಿಕೆಗಳನ್ನು ಕೇಳುವುದಕ್ಕೆ ಅಪಾರ ಸಂಖ್ಯೆಯ ಜನರು ಸೇರುತ್ತಾರೆ. ಹೀಗೆ ದೇವರ ಮುಖವಾಡವನ್ನು ಕಟ್ಟಿಕೊಂಡ ಒಡೆಯರುಗಳು ಡೊಳ್ಳಿನ ವಾಲಗದ ಸದ್ದಿನಲ್ಲಿ ಆಡುತ್ತ ಆಡುತ್ತ ಒಂದು ರೀತಿಯ ದೈವೀ ಉನ್ಮಾದ ಸ್ಥಿತಿಗೆ ತಲುಪುತ್ತಾರೆ. ಹೀಗೆ ದೈವೀ ಉನ್ಮಾದ ಸ್ಥಿತಿಯ ತುತ್ತ ತುದಿಗೆ ತಲುಪಿದಾಗ ಮುಖವಾಡಗಳನ್ನು ಧರಿಸಿದ ಒಡೆಯರು ಒಮ್ಮೆಲೆ ಆವೇಶದಿಂದ ಜಿಗಿದು ಡೊಳ್ಳಿನ ಮೇಲೆ ಏರಿ ನಿಲ್ಲುತ್ತಾರೆ. ತಕ್ಷಣವೇ ಬಾರಿಸುವ ಡೊಳ್ಳಿನ ವಾಲಗದ ಸದ್ದು ನಿಲ್ಲುತ್ತವೆ. ಎಲ್ಲಲ್ಲಿಯೂ ಒಂದು ರೀತಿಯ ನಿಶ್ಯಬ್ದ ವಾತಾವರಣ ಸೃಷ್ಟಿಯಾಗುತ್ತದೆ. ಆಗ ಡೊಳ್ಳಿನ ಮೇಲೆ ಏರಿದ ಒಡೆಯರು ಆಕಾಶದ ಕಡೆಗೆ ಮುಖಮಾಡಿ ಬೆತ್ತ

ಹಿಡಿದಿರುವ ಬಲಗೈಯನ್ನು ಮೇಲೆ ಎತ್ತಿ "ಎಲೇ ಗಾಣಮಿಣಿ" ಎಂದು ಹೇಳಿಕೆಯನ್ನು ಪ್ರಾರಂಭಿಸುತ್ತಾರೆ. ಇವುಗಳಿಗೆ ದೇವರ ಹೇಳಿಕೆಗಳು ಎಂದು ಕರೆಯುತ್ತಾರೆ. ಇದೇ ತರ ಹೇಳಿಕೆ (ಕಾಣಿಕೆ) ಹೇಳುವ ವಿಧಾನ ಹಡಗಲಿ ತಾಲೂಕು 'ಮೈಲಾರ'ದ ಜಾತ್ರೆಯಲ್ಲಿ ಕಾಣಬಹುದು. ಇದು ಶಾಂತಮುತ್ತಯ್ಯನ ಪಂಥದವರು 'ಕಾಲಜ್ಞಾನಿ'ಗಳು ಆಗಿದ್ದರು ಎಂದು ತಿಳಿಯಬಹುದು.

ವಿಶೇಷವಾಗಿ ಈ ಹೇಳಿಕೆಗಳು ಮುಂದೆ ಸಂಭವಿಸಲಿರುವ ಮಳೆ-ಬೆಳೆ, ಸುಖ-ದುಃಖ, ರೋಗ-ರುಜಿನ, ರಾಜಕೀಯ ಇತ್ಯಾದಿ ಸಂಗತಿಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಅವರಲ್ಲಿಯೂ ಒಡೆಯರುಗಳು ಮಾಡುವ ಹೇಳಿಕೆಗಳಲ್ಲಿ ಮುಕ್ಕಾಲು ಹೇಳಿಕೆಗಳು ಮುಂದೆ ಸಂಭವಿಸಬಹುದಾದ ಮಳೆ-ಬೆಳೆಗೆ ಸಂಬಂಧಿಸಿದವುಗಳಾಗಿರುತ್ತವೆ ಎಂಬುದನ್ನು ಮರೆಯುವಂತಿಲ್ಲ. ಈ ಸಂದರ್ಭದಲ್ಲಿ ಅಲ್ಲಿ ಸೇರಿರುವವರೆಲ್ಲ ಪಶುಪಾಲಕರು ಮತ್ತು ಕೃಷಿಕರೇ ಆಗಿರುತ್ತಾರೆ. ಹೀಗಾಗಿ ಅವರ ಆಶೋತ್ತರಗಳಿಗನುಗುಣವಾದ ಹೇಳಿಕೆಗಳೇ ಅಲ್ಲಿ ಜರುಗುತ್ತವೆ. ಉದಾಹರಣೆಗೆ:- "ಮಿರಗಕ್ಕೆ ಕೂರಿಗಿ ಸಾಗ ಮಾಡಬೇಕು ಅನ್ನುದರಾಗ ಕಡ್ಡಿ ಅಡ್ಡವಿತ್ತು". "ಅರಿದ್ರೀಗಿ ಎಂಟಾಣೆ ಬಾಗ ಸಾಗ ಮಾಡೀನಿ, ಸಜ್ಜಿ, ತೊಗರಿ ಸೇಂಗಾ, ಒಕ್ಕಲ ಮಗನಿಗೆ ಬಂಗಾರ ಖಿಡೆ ಒಗದೀನಿ", "ರೋಣಿ ಒಂದು ಭಾಗ ಸಾಗ ಮಾಡೀನಿ ಮಿರಗಕ್ಕ ಕೂರಗಿ ಸಾಗ ಮಾಡಬೇಕು ಅನ್ನುದರಾಗ ಕೊಡ್ಡ ಅಡ್ಡಬಿತ್ತು. ಪುಷ್ಯ ಪುನರುಶ್ಯಕ್ಕೆ ಸಂಪೂರ್ಣ ಮಾಡೀನಿ", 'ಮಿರಗಕ್ಕ ಅರಿದ್ರೀಗಿ ಕೂರಿಗಿ ಸಾಗ ಮಾಡಬೇಕು ಅನ್ನುದುರಾಗ ಕಸರ ಕುಂತು, ಭೂತ್ಯಾನ ಹಚ್ಚಿ ಬೈಲ ಮಾಡಿನಿ", "ಹೀಗಾರಿ ಮುಂಗಾರಿ ಕಟಾ ಮಾಡುದುರಾಗ ಹಿಂಗಾರಿ ಮುಂದಾಯಿತು" ಎಂಬಂತಹ ಹೇಳಿಕೆಗಳು ಸಂಪೂರ್ಣವಾಗಿ ಮುಂದೆ ಸಂಭವಿಸಬಹುದಾದ ಮಳೆ-ಬೆಳೆಗೆ ಸಂಬಂಧಪಟ್ಟವುಗಳಾಗಿವೆ ಎಂಬುದನ್ನು ಗಮನಿಸಬೇಕು. ಏಕೆಂದರೆ ಈ ಪ್ರದೇಶದ ಬಹುಪಾಲು ಜನರು ಕೃಷಿಕರು - ಮಳೆಯನ್ನೇ ನಂಬಿ ಬದುಕುವಂಥವರು. ಮಳೆ ಬಂದರೆ ಬೆಳೆ, ಬೆಳೆ ಬೆಳೆದರೆ ಬದುಕು, ಇವು ಇಲ್ಲದಿದ್ದರೆ ರೈತರ ಜೀವನ ಶೂನ್ಯವಾಗಿ ಬಿಡುತ್ತದೆ. ಹೀಗಾಗಿ ರೈತರು ಒಡೆಯರುಗಳು ಹೇಳುವ ಹೇಳಿಕೆಯಲ್ಲಿ ಬಂದಿರುವ ವಿಚಾರಗಳನ್ನು ಅನುಸರಿಸಿಯೇ ತಮ್ಮ ಕೃಷಿ ಚಟುವಟಿಕೆಗಳನ್ನು ಮಾಡುತ್ತಾರೆ. ಈ ಹೇಳಿಕೆಗಳು ಅಕ್ಷರಶಃ ಸತ್ಯವಾದವುಗಳೆಂದೇ ನಂಬುತ್ತಾರೆ. ಅದೇ ರೀತಿಯಾಗಿ ಮುಂದೆ ಬರಬಹುದಾದ ಕಷ್ಟ-ಕಾರ್ಪಣ್ಯ, ರೋಗ-ರುಜಿನಗಳ ತೊಂದರೆಯನ್ನೂ ಲೆಕ್ಕಚಾರ ಹಾಕಿ ಕೊಳ್ಳುತ್ತಾರೆ. "ಗಿಡದಾಗ ಹಣ್ಣಾಯಿತು, ಗಿಳಿ ಬಾಯಿಗಿ ಹುಣ್ಣ ಹುಟ್ಟಿತು", "ಕುದರೀಗಿ ತಡಿವಿಗದೀನಿ ಕುದರೀಮ್ಯಾಗ ಕಂದರಲಾಕ ಇಲ್ಲ ಅಂತಾನ", "ಊರ ಅಗಸ್ಯಾಗ ಕ್ವಾಣ ಹೊಕ್ಕತು, ರಜಾ ಬಂದು ಅಗಸ್ಯಾಗ ರಾಜಕೀಯ ಕ್ರಾಂತಿ, ದಂಗೆ ಇತ್ಯಾದಿಗಳ ಬಗ್ಗೆಯೂ ಹೇಳಿಕೆಗಳಲ್ಲಿ ಸೂಚ್ಯವಾಗಿ ಹೇಳಿರುವುದನ್ನು ಕಾಣಬಹುದಾಗಿದೆ. ೧೯೮೪ರ ಅಕ್ಟೋಬರ್ ತಿಂಗಳಲ್ಲಿ ನಮ್ಮ ದೇಶದ ಮಾಜಿಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅವರ ಹತ್ಯೆಯ ಸಂಗತಿಯನ್ನು ಒಡೆಯರುಗಳು ತಮ್ಮ ಹೇಳಿಕೆಗಳಲ್ಲಿ ಸೂಚ್ಯವಾಗಿ ಸೂಚಿಸಿದ್ದರು ಎಂಬುದನ್ನು ಇಲ್ಲಿಯ ಹಿರಿಯರು ನೆನಪಿಸಿಕೊಳ್ಳುತ್ತಾರೆ (ಮುದ್ದೇಬಿಹಾಳ ತಾ., ಸರೂರು ಜಿ, ವಿಜಾಪುರ)

ಇದೇ ರೀತಿಯ ಹೇಳಿಕೆಗಳನ್ನು ರೇವಣಸಿದ್ಧ ಸಂಪ್ರದಾಯದ ಒಡೆಯರುಗಳು ಮಾಡುತ್ತಾರೆ. ಆದರೆ ಇವರು ಮುಳ್ಳ ಕಂಟಿಯ ಮೇಲೆ ನಿಂತು ಹೇಳಿಕೆ ಮಾಡುವುದನ್ನು ಕಾಣುತ್ತೇವೆ. ಹೀಗೆ ಮುಳ್ಳ

ಮೇಲೆ ನಿಂತು ಮಾಡುವ ಹೇಳಿಕೆಗಳು ಮಹಾಶಿವರಾತ್ರಿಯ ಸಂದರ್ಭದಲ್ಲಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮದಲ್ಲಿ ಜರುಗುವುದನ್ನು ಗಮನಿಸಬಹುದಾಗಿದೆ. ಈ ರೀತಿ ಹೇಳಿಕೆಗಳನ್ನು ಹೇಳುವ ಸಂಪ್ರದಾಯ ವಿಶೇಷವಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಮಾತ್ರ ಪ್ರಚಲಿತದಲ್ಲಿದೆ.

**೪.೩.೩. ಸರೂರು ಜಾತ್ರೆ**

ರೇವಣಸಿದ್ಧ ಸಂಪ್ರದಾಯದ ಒಡೆಯರುಗಳ ನೆಲೆಗಳಲ್ಲಿ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮವು ತುಂಬಾ ಪ್ರಮುಖವಾದುದಾಗಿದೆ. ಈ ಊರಿನಲ್ಲಿ ರೇವಣಸಿದ್ಧೇಶ್ವರ, ಶಾಂತಮುತ್ತಯ್ಯನವರ ಪಲ್ಲಕ್ಕಿ ಉತ್ಸವ ಮತ್ತು ಜಾತ್ರೆಗಳು ವಿಶೇಷವಾಗಿ ಮಹಾಶಿವರಾತ್ರಿ, ಮಹಾನವಮಿ, ಯುಗಾದಿಯ ಸಂದರ್ಭದಲ್ಲಿ ನಡೆಯುತ್ತವೆ. ಮಹಾಶಿವರಾತ್ರಿ ಮತ್ತು ಯುಗಾದಿಪಾಡ್ಯದೆಂದು ರೇವಣಸಿದ್ಧ ಶಾಂತಮುತ್ತಯ್ಯನವರ ಪಲ್ಲಕ್ಕಿಗಳು ತೂಗುಡ್ಡಕ್ಕೆ ಹೋಗುತ್ತವೆ. ವಿಶೇಷ ಪೂಜೆಯನ್ನು ಮಾಡಿಸಿಕೊಂಡು ದೇವರನ್ನು ಪಲ್ಲಕ್ಕಿಯಲ್ಲಿ ಇಟ್ಟುಕೊಂಡು ಡೊಳ್ಳುವಾದ್ಯ, ಕೊಂಬು, ಕಹಳೆಗಳನ್ನು ಬಾರಿಸುತ್ತ, ಊರ ಬೀದಿಗಳಲ್ಲಿ ಮೆರವಣಿಗೆಯನ್ನು ಮಾಡುತ್ತ ಮರಳಿ ದೇವಸ್ಥಾನಕ್ಕೆ ಬರುತ್ತಾರೆ. ಇದೇ ಸುಮಾರು ನಾಲ್ಕು ಗಂಟೆಗೆ ಒಡೆಯರ ಮನೆಯಿಂದ ಹೊರಟ ಪಲ್ಲಕ್ಕಿ ರಾತ್ರಿ ಎಂಟು ಗಂಟೆಯ ಸುಮಾರಿಗೆ ಹೊರಗಡೆ ಇರುವ ದೇವಾಲಯವನ್ನು ತಲುಪುತ್ತದೆ. ಈ ಸಂದರ್ಭದಲ್ಲಿ ನಡೆಯುವ ಡೊಳ್ಳಿನ ವಾಲಗ ನೋಡುಗರನ್ನು ಬೆರಗುಗೊಳಿಸುತ್ತದೆ. ದಾರಿಯುದ್ದಕ್ಕೂ ಮಹಿಳೆಯರ ಮತ್ತು ಕುಟುಂಬಸ್ಥರು ಹೆಡೆಯನ್ನು ಅರ್ಪಿಸಿ ಒಡೆಯರಿಂದ ಆಶೀರ್ವಾದ ಪಡೆದುಕೊಳ್ಳುತ್ತಿರುತ್ತಾರೆ. ಪಲ್ಲಕ್ಕಿ ದೇವಾಲಯವನ್ನು ಏಳು ಸುತ್ತು, ಸುತ್ತು ಹಾಕುವರು. ನಂತರ ಆಯಾ ಗದ್ದುಗೆಯ ಮೇಲೆ ಆಯಾ ದೈವಗಳ ಮೂರ್ತಿಗಳನ್ನು ಇಟ್ಟು ಪೂಜೆ ಮಾಡುವರು. ಆ ನಂತರ ಇಲ್ಲಿ ಹೇಳಿಕೆಗಳು ನಡೆಯುತ್ತವೆ. ಇದೇ ರೀತಿಯ ಹೇಳಿಕೆಗಳನ್ನು ರೇವಣಸಿದ್ಧ ಸಂಪ್ರದಾಯದ ಒಡೆಯರುಗಳು ಹೇಳುತ್ತಾರೆ. ಇವುಗಳನ್ನು 'ಸಿದ್ಧಾಟಿಕೆ'ಗಳೆಂದು ಕರೆಯುತ್ತಾರೆ. ಹೇಳಿಕೆ ಹೇಳುವುದು ಶಿವನಿಂದ ಬಂದ ವರಪ್ರಸಾದ ಎನ್ನುವುದು ಇವರ ನಂಬಿಕೆ. ಈ ನಂಬಿಕೆಗೆ ಸಂಬಂಧಿಸಿದ ಕಥನಗಳು ಕುರುಬ ಸಂಸ್ಕೃತಿಯಲ್ಲಿ ಕೇಳಿ ಬರುತ್ತವೆ. ಜನರು ಈ ಹೇಳಿಕೆಗಳನ್ನು 'ದೈವವಾಣಿ'ಯೆಂದು ನಂಬುತ್ತಾರೆ. ಒಳಿತು ಕೆಡಕು, ಮಳೆ-ಬೆಳೆಯನ್ನು ಲೆಕ್ಕಚಾರ ಮಾಡಿಕೊಂಡು ವರ್ಷದ ಜೀವನಕ್ಕೆ ಪೂರ್ವಸಿದ್ಧವಾಗುತ್ತಾರೆ.

ಪ್ರತಿ ವರ್ಷ ಶ್ರಾವಣ ಸೋಮವಾರ ಜೋಡ ಪಲ್ಲಕ್ಕಿ ಮೆರವಣಿಗೆ ಹಾಗೂ ಏಳೂ ಮುಳ್ಳು ಕಂಟಿಯ ಮೇಲೆ ನಿಂತು ಹೇಳಿಕೆ ಮಾಡುವುದನ್ನು ಕಾಣುತ್ತೇವೆ. ಹೀಗೆ ಮುಳ್ಳ ಮೇಲೆ ನಿಂತು ಮಾಡುವ ಹೇಳಿಕೆಗಳು ಮಹಾಶಿವರಾತ್ರಿಯ ಸಂದರ್ಭದಲ್ಲಿ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮದಲ್ಲಿ ಜರುಗುವುದನ್ನು ಗಮನಿಸಬಹುದಾಗಿದೆ. ಈ ರೀತಿ ಹೇಳಿಕೆಗಳನ್ನು ಹೇಳುವ ಸಂಪ್ರದಾಯ ವಿಶೇಷವಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಮಾತ್ರ ಪ್ರಚಲಿತದಲ್ಲಿದೆ. ಒಟ್ಟಿನಲ್ಲಿ ಈ ಊರಿನ ಜಾತ್ರೆಯು ವಿಶೇಷವಾಗಿದೆ. ಇದು 'ಪಶುಪಾಲನೆ ಸಂಸ್ಕೃತಿ' ಮತ್ತು 'ಕೃಷಿಸಂಸ್ಕೃತಿ'ಯನ್ನು ನೆನಪಿಸುತ್ತದೆ. ಇದೇ ತರಹದ ಹೇಳಿಕೆಗಳನ್ನು ಹೇಳುವ ಆಚರಣೆಗಳು ಮೈಲಾರ, ಬೀರಪ್ಪ, ಅಮೋಘಸಿದ್ಧ ಮುಂತಾದ

ಕುರುಬ ದೈವಗಳಲ್ಲಿ ನಡೆಯುತ್ತದೆ. ಅದರಲ್ಲಿಯೂ ದೇವತಾರಾಧನೆ, ಹಬ್ಬ, ಉತ್ಸವ, ಜಾತ್ರೆ ಮುಂತಾದ ಸಂದರ್ಭದಲ್ಲಿ ಆಚರಿಸಿಕೊಂಡು ಬಂದಿರುವ ಆಚರಣೆಗಳು ತುಂಬ ವಿಶಿಷ್ಟವಾದವುಗಳಾಗಿವೆ. ಆ ಆಚರಣೆ ಸಂಪ್ರದಾಯಗಳನ್ನು ಯಥಾವತ್ತಾಗಿ ಕಾಪಾಡಿಕೊಂಡು ಬಂದಿರುವುದು ಮತ್ತೊಂದು ವಿಶಿಷ್ಟ್ಯವಾಗಿದೆ.

**ಟಿಪ್ಪಣಿಗಳು**

೧. ಹೇಳಿದವರು; ಮಲ್ಲಿಕಾರ್ಜುನ ಒಡೆಯರು, ಮುದ್ದೇಬಿಹಾಳ ತಾಲೂಕು, ಬಿಜಾಪೂರ ಜಿಲ್ಲೆ, ಸರೂರು ಗ್ರಾಮ.

೨. ಪಗರಣ ಮತ್ತು ಇತರ ಪ್ರಬಂಧಗಳು; ಎಂ. ಚಿದಾನಂದಮೂರ್ತಿ, ಪು. ೧೨೩.

೩. ಕುರುಬರ ಚರಿತ್ರೆ; ವಿ.ಆರ್. ಹನುಮಂತಯ್ಯ (ಸಂ), ಸುಧಾಕರ, ಪು. ೨೬.

೪. ಒಡೆಯರ ಸಂಪ್ರದಾಯದ ವೈಶಿಷ್ಟ್ಯಗಳು; ಸಿ.ಕೆ. ಪರಶುರಾಮಯ್ಯ ಅಪ್ರಕಟಿತ ಲೇಖನದಿಂದ.

೫. ಮಾಹಿತಿ ನೀಡಿದವರು; ಶ್ರೀ ಮಲ್ಲಿಕಾರ್ಜುನಯ್ಯ, ಕೆ. ಒಡೆಯರು, ಸಾ. ಸರೂರು ತಾಲೂಕು, ಮುದ್ದೇಬಿಹಾಳ ಜಿ., ವಿಜಾಪುರ.

೬. ಜನಪದ ಕವಿ ಕಂಡ ರೇವಣಸಿದ್ಧ; ಎಸ್.ಜಿ. ಸಿದ್ಧರಾಮಯ್ಯ, ಪಾವನ, ಪು. ೪೦.

೭. ಜನಪದ ಕವಿ ಕಂಡ ರೇವಣಸಿದ್ಧ; (ಲೇಖನ) ಎಸ್.ಜಿ. ಸಿದ್ಧರಾಮಯ್ಯ, ಪಾವನ, ಪು. ೪೨-೪೩.

೮. ಅದೇ. ಪು. ೪೪.

೯. ಮಾಹಿತಿ ನೀಡಿದವರು; ಶ್ರೀ ಮಲ್ಲಿಕಾರ್ಜುನಯ್ಯ, ಕೆ. ಒಡೆಯರು, ಸಾ. ಸರೂರು ತಾಲೂಕು, ಮುದ್ದೇಬಿಹಾಳ ಜಿ., ವಿಜಾಪುರ.

೧೦. ಕುರುಬರ ಗುರು ಒಡೆಯರು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಮಹಾಪ್ರಬಂಧ, ಬಿ.ಜಿ.; ಬಿರಾದಾರ, ಪು. ೧೫೫-೧೬೨.

೧೧. ಅದೇ. ಪು. ೧೫೫-೧೬೨.

೧೨. ಜನಪದ ಕವಿ ಕಂಡ ರೇವಣಸಿದ್ಧ; ಎಸ್.ಜಿ. ಸಿದ್ಧರಾಮಯ್ಯ, ಪಾವನ, ಪು. ೩೭-೪೨.

೧೩. ಕುರುಬರ ಚರಿತ್ರೆ, ವ್ಹಿ.ಆರ್. ಹನುಮಂತಯ್ಯ (ಸಂ), ಸುಧಾಕರ, ಪು. ೧೪೨.

೧೪. ಹೇಳಿಕೆ ಮಾಡ್ಯಾರು ಒಡೆಯರು (ಸಂ); ಎಂ.ಎಂ. ಪಡಶೆಟ್ಟಿ, ಅನುಬಂಧ-೨, ಪು ೩೦-೩೧.

೧೫. ಕುರುಬರ ಗುರು ಒಡೆಯರು (ಸಂ); ಡಾ. ಎಫ್.ಟಿ. ಹಳ್ಳಿಕೇರಿ, ಪು. ೯೧.

೧೬. ಹೇಳಿಕೆ ಮಾಡ್ಯಾರು ಒಡೆಯರು (ಸಂ); ಎಂ.ಎಂ. ಪಡಶೆಟ್ಟಿ, ಪು. xix.

೧೭. ಕುರುಬರು ಗುರು ಒಡೆಯರು (ಸಂ); ಡಾ. ಎಫ್.ಟಿ. ಹಳ್ಳಿಕೇರಿ (ಲೇ), ಒಡೆಯರ ಹೇಳಿಕೆಗಳು, ಎಂ.ಎಂ. ಪಡಶೆಟ್ಟಿ, ಪು. ೯೦.

೧೮. ಹೇಳಿಕೆ ಮಾಡ್ಯಾರು ಒಡೆಯರು; ಎಂ.ಎಂ. ಪಡಶೆಟ್ಟಿ, ಪು. xxii.

• • •

# ಅಧ್ಯಾಯ ಐದು

# ಸಮಾರೋಪ

'ಸರೂರು ಶಾಂತಮುತ್ತಯ್ಯ : ಒಂದು ಅಧ್ಯಯನ' ಎನ್ನುವ ಪ್ರಸ್ತುತ ಅಧ್ಯಯನವು ಕುರುಬರ ಗುರು ಶಾಂತಮುತ್ತಯ್ಯನ ಜೀವನ ಚರಿತ್ರೆಯನ್ನು ಕುರಿತ ಅಧ್ಯಯನವಾಗಿದೆ. ಇಲ್ಲಿ ಶಾಂತಮುತ್ತಯ್ಯನನ್ನು ಈವರೆಗೆ ಬಂದ ಅಧ್ಯಯನಗಳಿಗಿಂತ ಭಿನ್ನವಾಗಿ ಅಧ್ಯಯನ ಮಾಡಲಾಗಿದೆ. ಅಂದರೆ ಕೇವಲ ಆತನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಚಾರಿತ್ರಿಕ ಆಕರಗಳನ್ನು ಇಟ್ಟುಕೊಂಡು ಅಧ್ಯಯನ ಮಾಡದೇ, ಆತ ಹುಟ್ಟುಹಾಕಿದ ಕುರುಬಕುಲಗುರು ವರ್ಗದ ಸಾಂಸ್ಕೃತಿಕ ಅನನ್ಯತೆಯನ್ನು ಇಟ್ಟುಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕುರುಬಕುಲಗುರು ವರ್ಗಗಳಲ್ಲಿ ಒಂದಾದ ಶಾಂತ ಒಡೆಯರು ಅಥವಾ ರೇವಸಿದ್ಧ ಒಡೆಯರ ಕುಲಮೂಲ ಸೃಷ್ಟಿ, ವೃತ್ತಿಮೂಲ ಸೃಷ್ಟಿ ಮತ್ತು ಧಾರ್ಮಿಕ, ಆರ್ಥಿಕ ಸಾಮಾಜಿಕ ಜೀವನ ವಿಧಾನಗಳನ್ನು ಅಧ್ಯಯನಕ್ಕೆ ಒಳಪಡಿಸುವುದರ ಮುಖಾಂತರ ಶಾಂತಮುತ್ತಯ್ಯನನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ವಿಧಾನಕ್ಕಾಗಿ ಮೌಖಿಕ ಹಾಗೂ ಲಿಖಿತ ಸಾಹಿತ್ಯಿಕ ಪಠ್ಯಗಳನ್ನು, ಆಚರಣೆ, ನಂಬಿಕೆ, ಮಠಗಳ ರಚನೆ ಮತ್ತು ಅವುಗಳ ಭೌಗೋಳಿಕ ಪರಿಸರ ಮುಂತಾದ ಆಕರಗಳನ್ನು ಬಳಕೆ ಮಾಡಿಕೊಳ್ಳಲಾಗಿದೆ. ಜೊತೆಗೆ ಒಡೆಯರ ಸಂದರ್ಶನಗಳನ್ನು ಅಧ್ಯಯನದ ವಿಶ್ಲೇಷಣೆಗೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ಈ ಪರಿಕಲ್ಪನೆಯ ಹಿನ್ನೆಲೆ ಯಲ್ಲಿ ಪ್ರಸ್ತುತ ಅಧ್ಯಯನವು ರೂಪುಗೊಂಡಿದೆ.

ಭಾರತದ 'ಕುಲಗುರು'ವರ್ಗದಲ್ಲಿ 'ಕುರುಬ ಕುಲಗುರು'ವರ್ಗವು ವಿಶಿಷ್ಟವಾಗಿ ನಿಲ್ಲುತ್ತದೆ. ಕುಲಕ್ಕೆ ಕುಲದವರೇ ಕುಲಗುರುಗಳಾಗಿ ಕಾರ್ಯನಿರ್ವಹಿಸುವ ವಿಶಿಷ್ಟ ವರ್ಗವಿದು. ಈ ಅನನ್ಯತೆಯಿಂದಲೇ ಇತರ ಗುರುವರ್ಗಗಳಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಅಂತಹ ಕುರುಬ ಗುರುವರ್ಗದಲ್ಲಿ ಶಾಂತ ಒಡೆಯ ವರ್ಗವು ಒಂದು. ಈ ಗುರುವರ್ಗ ಕುರುಬ ಗುರುಕುಲ ವರ್ಗಗಳಲ್ಲಿ ಮುಂಚೂಣಿಯಲ್ಲಿದೆ ಅಥವಾ ಪ್ರಧಾನಧಾರೆಯಲ್ಲಿ ಕಾಣಿಸಿಕೊಳ್ಳುತ್ತಿದೆ. ಹೆಚ್ಚು ಜನಪ್ರಿಯತೆಯಲ್ಲಿಯೂ ಇದೆ. ಹೆಚ್ಚು ಪ್ರದೇಶ ದಲ್ಲಿ ವಿಸ್ತರಣೆಯಾಗಿ ಹಲವು ಶಾಖಾಮಠಗಳನ್ನು ಸ್ಥಾಪಿಸಿಕೊಂಡು ಕಾರ್ಯನಿರ್ವಹಿಸುತ್ತಿದೆ. ಇದಕ್ಕೆ ಹಲವಾರು ಕಾರಣಗಳಿವೆ. ರೇವಣಸಿದ್ಧನನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡಿರುವುದು ಇದಕ್ಕೆ ಪ್ರಮುಖ ಕಾರಣ. ರೇವಣಸಿದ್ಧನನ್ನು ಆರಾಧ್ಯ ದೈವಗಳನ್ನಾಗಿ ಮಾಡಿಕೊಂಡಿದ್ದ ರಾಜಮನೆತನಗಳು ರೇವಣಸಿದ್ಧನ ಮಠಗಳಿಗೆ ರಾಜಾಶ್ರಯವನ್ನು ಕೊಟ್ಟವು ಮತ್ತು ತುಂಬಾ ವ್ಯವಸ್ಥಿತವಾದ ರೀತಿಯಲ್ಲಿ ಮಠಗಳ ವಿಸ್ತರಣೆ ಮಾಡಿದವು. ಹಾಗಾಗಿ ರೇವಣಸಿದ್ಧನನ್ನು ಆರಾಧ್ಯ ದೈವವನ್ನಾಗಿ ಆರಾಧನೆ ಮಾಡುತ್ತಿದ್ದ

ಶಾಂತ ಒಡೆಯರ ಸಂಸ್ಕೃತಿಯು ವಿಸ್ತರಣೆಯಾಯಿತು. ಹೆಚ್ಚು ಹೆಚ್ಚು ಜನಪ್ರಿಯತೆ ಪಡೆಯುತ್ತಿದ್ದಂತೆ ಈ ದೈವವನ್ನು ಆರಾಧಿಸುವ ಕುರುಬ ವರ್ಗವು ಹೆಚ್ಚುತ್ತಾ ಹೋಯಿತು. ಶಾಂತ ಒಡೆಯರನ್ನು 'ರೇವಣಸಿದ್ಧ' ಒಡೆಯರು ಎಂದು ಕರೆಯುವ ಪದ್ಧತಿಯು ಇದೆ. ಇದು ಕುಲಮೂಲದಿಂದ ಬಂದ ಹೆಸರು ಅನ್ನುವುದಕ್ಕಿಂತ ಜನಪ್ರಿಯತೆಯಿಂದ ಬಂದ ಹೆಸರು ಎನ್ನಬಹುದು. ಹಾಗಾಗಿ ಶಾಂತ ಒಡೆಯರು ಅನ್ನುವುದು ಆರಾಧ್ಯ ದೈವದ ಹಿನ್ನೆಲೆಯಲ್ಲಿ ಬಂದ ಹೆಸರಾಗಿದೆ. ಶಾಂತ ಒಡೆಯರು ಎನ್ನುವುದು ಇವರ 'ಕುಲಮೂಲ' ಹೆಸರು. ರೇವಣಸಿದ್ಧ ಮಠಗಳಲ್ಲಿ ಸಿಗುವ ಹಕ್ಕು ಪತ್ರಗಳು ಮತ್ತು ಶಾಸನಗಳು ಇದನ್ನು ಸ್ಪಷ್ಟಗೊಳಿಸುತ್ತವೆ. ಜೊತೆಗೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿರುವ ರೇವಣಸಿದ್ಧ ಮಠಗಳ ಒಡೆಯರು "ತಮ್ಮ ಕುಲಮೂಲ ವ್ಯಕ್ತಿ ಸರೂರು ಶಾಂತಮುತ್ತಯ್ಯನೆಂದು ಆತನಿಂದಲೇ ನಮ್ಮ ಗುರುವೃತ್ತಿ ಆರಂಭವಾಯಿತೆಂದು ಹೇಳಿಕೊಳ್ಳುತ್ತಾರೆ. ಸ್ವಾರಸ್ಯವೆಂದರೆ ಇವರಲ್ಲಿ ಬಹಳ ಮಠಗಳ ಒಡೆಯರು ತಮ್ಮ ಕುಲಮೂಲ ನಾಯಕನಾದ ಶಾಂತಮುತ್ತಯ್ಯನ ಮೂಲ ಸ್ಥಳವಾದ ಸರೂರು ಗ್ರಾಮವನ್ನು ನೋಡಿಲ್ಲ. ಸರೂರು ಗ್ರಾಮ ಎಲ್ಲಿದೆ ಎನ್ನುವ ಸ್ಪಷ್ಟವಾದ ಮಾಹಿತಿಯೂ ಕೆಲವರಿಗೆ ಇಲ್ಲ. ಆದರೂ 'ನಮ್ಮ ಮೂಲ ಸ್ಥಳ ಸರೂರು. ಆ ಭಾಗದಿಂದ ನಮ್ಮ ಹಿರಿಯರು ಈ ಕಡೆ ವಲಸೆ ಬಂದಿದ್ದಾರೆ. ನಾವು ಶಾಂತ ಮುತ್ತಯ್ಯನ ವಂಶಸ್ಥರು. ನಮ್ಮ ಮೂಲ ಮಠ ಸರೂರು ಗ್ರಾಮದಲ್ಲಿದೆ' ಎಂದು ಹೇಳಿಕೊಳ್ಳುತ್ತಾರೆ. ಕೆಲವು ಗ್ರಾಮದ ರೇವಣಸಿದ್ಧ ಮಠಗಳ ಒಡೆಯರು ಸರೂರು ಗ್ರಾಮದಲ್ಲಿ ಬಂದು 'ದೀಕ್ಷೆ' ತೆಗೆದುಕೊಂಡು ಹೋಗುತ್ತಾರೆ. ತಮ್ಮ ಕುಲಮೂಲ ಸ್ಥಳದಲ್ಲಿ ದೀಕ್ಷೆ ತೆಗೆದುಕೊಳ್ಳಬೇಕು ಅನ್ನುವುದು ಇವರ ನಂಬಿಕೆ. ಸರೂರು ಗ್ರಾಮದಲ್ಲಿ ಈಗ ಸಿಗುವ ಶಾಂತ ಒಡೆಯರ ತಲೆಮಾರಿನವರು ಕರ್ನಾಟಕದಲ್ಲಿರುವ ರೇವಣಸಿದ್ಧ ಮಠಗಳಿಗೆ ಅಥವಾ ಶಾಂತ ಒಡೆಯರ ಮನೆತನಗಳಿಗೆ ಹೋಗಿರುವುದು ತುಂಬಾ ಕಡಿಮೆ. ಎಷ್ಟು ಮಠಗಳಿವೆ? ಇತ್ತೀಚಿಗೆ ಎಷ್ಟು ಮಠಗಳು ಆರಂಭವಾಗಿವೆ? ಎನ್ನುವ ಖಚಿತ ಲೆಕ್ಕವು ಇಲ್ಲ. ಆದರೂ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿ ನಮ್ಮ ಮಠದ ಉಪಶಾಖೆಗಳಿವೆ ಎಂದು ಇವರು ಹೇಳಿಕೊಳ್ಳು ತ್ತಾರೆ. ಒಂದುಗೂಡಿಸುವ ಅಥವಾ ಎಲ್ಲಾ ಮಠಗಳನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಳ್ಳುವ ಮಹತ್ವಾ ಕಾಂಕ್ಷೆಯನ್ನು ಹೊಂದಿದ್ದಾರೆ. ಆರಂಭ ಮಾಡುವುದು ಹೇಗೆ ಅನ್ನುವ ಗೊಂದಲದಲ್ಲಿ ಇದ್ದಾರೆ. ಹೆಚ್ಚುತ್ತಿ ರುವ ಕನಕ ಮಠಗಳ ಜನಪ್ರಿಯತೆ ತಮ್ಮನ್ನು ತಡೆಯುತ್ತದೆ ಅನ್ನುವ ಆತಂಕ ಇವರಲ್ಲಿದೆ. ಆದರೂ ಶಾಂತಮುತ್ತಯ್ಯನ ಕುಲದವರು ಒಂದಾಗುವುದಕ್ಕೆ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕೆ ಹಂಬಲಿಸು ತ್ತಿದ್ದಾರೆ. ಇದು ಶಾಂತಮುತ್ತಯ್ಯ ಹುಟ್ಟು ಹಾಕಿದ ಸಂಸ್ಕೃತಿಯ ಮಹತ್ವವನ್ನು ತಿಳಿಸುತ್ತದೆ.

ಈ ಒಡೆಯರುಗಳು ಕುರುಬರ ಕುಲಗುರುಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದರಲ್ಲಿ ಬೀರಪ್ಪನ ಸೇವಕ ವರ್ಗವಾದ 'ದಳವಾಯಿ', 'ಈರಗಾರ', 'ಪೂಜಾರಿ' ಮುಂತಾದ ಹಾಲುಮತ ದೈವಗಳ ಅರ್ಚಕ ವರ್ಗಗಳಿಗೆ ಲಿಂಗದೀಕ್ಷೆ ಕೊಡುವುದು, ಕುಲಕೆಟ್ಟವರಿಗೆ (ಚಪ್ಪಲಿ ಹೊಡೆದಾಟ ಮುಂತಾದ ಕಾರ್ಯಗಳಿಂದ) ಕುಲದೀಕ್ಷೆ ಕೊಡುವುದು, ಕುಲ ನ್ಯಾಯಗಳನ್ನು ನಿರ್ವಹಿಸುವುದು ಮುಂತಾದ ಸಾಮುದಾಯಿಕ ಜವಾಬ್ದಾರಿ ಗಳು ಸೇರಿವೆ. ಈ ಸಂದರ್ಭಗಳಲ್ಲಿ ರೇವಣಸಿದ್ಧ ಮತ್ತು ಶಾಂತಮುತ್ತಯ್ಯ ಇಬ್ಬರನ್ನು ನೆನೆಯುತ್ತಾರೆ. ಅಲ್ಲಿಯೂ ರೇವಣಸಿದ್ಧನನ್ನು ಗುರು ಎಂದು ಕರೆದರೆ ಶಾಂತಮುತ್ತಯ್ಯನನ್ನು 'ಕುಲಸ್ಥಾಪಕ'ನೆಂದು

ಕರೆದುಕೊಳ್ಳುವಲ್ಲಿ ಎರಡು ಅರ್ಥಗಳಿರುವುದಕ್ಕೆ ಸಾಧ್ಯತೆ ಇದೆ. ಒಂದನೆಯದಾಗಿ ಈ ವ್ಯಕ್ತಿಯ ಮನೆತನದವರು ಅಥವಾ ರಕ್ತಸಂಬಂಧಗಳು. ಎರಡನೆಯದಾಗಿ 'ಶಿಸು ಮಕ್ಕಳು' ಅಥವಾ 'ಒಕ್ಕಲು ಮಕ್ಕಳು' ಆಗಿರುವುದಕ್ಕೆ ಸಾಧ್ಯವಿದೆ. ಏಕೆಂದರೆ ಶಾಂತಮುತ್ತಯ್ಯ 'ಕಲ್ಯಾಣ'ದಲ್ಲಿ 'ತಗರಪವಾಡ' ಮಾಡಿದ ರೇವಣಸಿದ್ಧನ ಸಮ್ಮುಖದಲ್ಲಿ ಹಲವು ಕುರುಬರಿಗೆ ಲಿಂಗದೀಕ್ಷೆ ನೀಡಿದ ಅನ್ನುವ ಚಾರಿತ್ರಿಕ ಕಥನಗಳು ಸಾಕಷ್ಟು ಸಿಗುತ್ತವೆ. ಈ ಕಾರ್ಯ ಆನಂತರವೂ ಮುಂದುವರೆಯಿತು. ಶಾಂತಮುತ್ತಯ್ಯ ಸರೂರು ಗ್ರಾಮದಲ್ಲಿ ಲಿಂಗದೀಕ್ಷೆ ಮಾಡುತ್ತಿದ್ದ ಅನ್ನುವ ಉಲ್ಲೇಖಗಳು ಜನಪದ ಗೀತೆಗಳಲ್ಲಿ ಸಿಗುತ್ತದೆ. ಹಾಗಾಗಿ ಶಾಂತ ಮುತ್ತಯ್ಯ ರೇವಣಸಿದ್ಧನ ಸಮ್ಮುಖದಲ್ಲಿ ಅಥವಾ ನಂತರದ ದಿನಮಾನಗಳಲ್ಲಿ ಕುರುಬರಿಗೆ ಲಿಂಗದೀಕ್ಷೆ ನೀಡುವುದರ ಮುಖಾಂತರ ತನ್ನ ಒಕ್ಕಲು ಮಕ್ಕಳನ್ನಾಗಿ ಮಾಡಿಕೊಂಡು ಕುರುಬ ಗುರುವರ್ಗವಾಗಿ ಕಾರ್ಯನಿರ್ವಹಿಸುವುದಕ್ಕೆ ಕಳಿಸಿರಲು ಸಾಧ್ಯವಿದೆ. ಇದರಲ್ಲಿ ಶಾಂತಮುತ್ತಯ್ಯನ ನೇರ ಮನೆತನದವರ ವಿಸ್ತರಣೆಯೂ ಸೇರಿಕೊಂಡಿರಬಹುದು. ಶಾಂತಮುತ್ತಯ್ಯನ ವಂಶಸ್ಥರೆನ್ನುವ ತಾತ್ವಿಕ ಅಂಶವನ್ನು ಪಡೆದು ಕೊಂಡು ಕುರುಬರ ಕುಲಗುರುಗಳಾಗಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಈ ಎಲ್ಲಾ ಅಂಶಗಳಿಂದ ಶಾಂತಮುತ್ತಯ್ಯ 'ಶಾಂತ ಒಡೆಯರ' ಮೂಲ ಪುರುಷ ಎಂದು ತಿಳಿದುಬರುತ್ತದೆ. ಹಾಗಾಗಿ ಈತನನ್ನು 'ಕುರುಬ ಗುರುವರ್ಗ'ವನ್ನು ಆರಂಭಿಸಿದ ಆದ್ಯ ಪುರುಷ ಎಂದು ಕರೆಯಬಹುದು. ಈತ ಮೂಲತಃ ಶೈವ ಆರಾಧಕ. ಕುರಿಗಾರಿಕೆ ವೃತ್ತಿ ಮನೆತನಕ್ಕೆ ಸೇರಿದ ವ್ಯಕ್ತಿ. ರೇವಣಸಿದ್ಧನ ಸಮಕಾಲೀನಾಗಿದ್ದರೂ ರೇವಣಸಿದ್ಧನನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡ ವ್ಯಕ್ತಿ. ಆದರೂ 'ಕುರುಬ ಸಾಂಸ್ಕೃತಿಕ' ಸಂರಕ್ಷಣೆಗಾಗಿ ಹೋರಾಟ ಮಾಡಿದ ವಿಧಾನ ರೇವಣಸಿದ್ಧನಿಗಿಂತಲೂ ಭಿನ್ನವಾಗಿ ಕಾಣಿಸುತ್ತದೆ. ತನ್ನ ಕುಲವರ್ಗದವರ ಮೇಲೆ ಕಲ್ಯಾಣದ ಅರಸ ಮಾಡಿದ ಆಪಾದನೆಗಾಗಿ ವಾಪಸು ತೆಗೆದುಕೊಳ್ಳುವಂತೆ ಉಗ್ರವಾದ ತಪಸ್ಸು ಮಾಡುತ್ತಾನೆ. ಪ್ರತಿರೋಧಕ್ಕೆ ಜನರನ್ನು ಒಂದುಗೂಡಿಸಿ ಸ್ಫೂರ್ತಿ ನೀಡುತ್ತಾನೆ. ಕುರುಬರ ಮೇಲೆ ಹಾಕಿರುವ ನಿಷೇಧವನ್ನು ವಾಪಸು ಪಡೆಯುವಂತೆ ಅಂಗಲಾಚುತ್ತಾನೆ ಈ ಕಾರ್ಯ ಮಹತ್ವವಾದದ್ದು. ಇದಕ್ಕೆ ಮನಸೋತ ರೇವಣಸಿದ್ಧ ಶಾಂತಮುತ್ತಯ್ಯನನ್ನು ಹುಡುಕಿಕೊಂಡು ಬರುತ್ತಾನೆ. ಹೋರಾಟದಲ್ಲಿ ಭಾಗಿಯಾಗುತ್ತಾನೆ. ಬೆಂಬಲ ವ್ಯಕ್ತಪಡಿಸುತ್ತಾನೆ. 'ಸಿದ್ಧರಾಮ' ಮತ್ತು ಇತರ ನಾಯಕರಿಗೆ ಶಾಂತಮುತ್ತಯ್ಯನ ಹೋರಾಟವನ್ನು ಬೆಂಬಲಿಸುವಂತೆ ಹೇಳುತ್ತಾನೆ. ಈ ಹಂಬಲದಿಂದಲೇ ಶಾಂತಮುತ್ತಯ್ಯ ರೇವಣಸಿದ್ಧನಿಗಿಂತ ಅಥವಾ ಹಾಲುಮತದ ಇತರ ಸಾಂಸ್ಕೃತಿಕ ನಾಯಕರಿಗಿಂತ ಭಿನ್ನವಾಗಿ ಕಾಣಿಸುತ್ತಾನೆ. ಇಂತಹ ಗುಣವನ್ನು ಹೊಂದಿದ್ದ ಕಾರಣಕ್ಕಾಗಿಯೇ ಹಾಲುಮತ ಸಂಸ್ಕೃತಿಯಲ್ಲಿ ಕುಲಗುರುವೆಂದು ಪ್ರಭಾವಿತನಾದ ರೇವಣಸಿದ್ಧನಷ್ಟೇ ಸಮಾನವಾದ ಮತ್ತು ಭಿನ್ನವಾದ ಸ್ಥಾನವನ್ನು ಪಡೆದುಕೊಳ್ಳುವುದಕ್ಕೆ ಸಾಧ್ಯವಾಯಿತು. ರೇವಣಸಿದ್ಧನ ಸಮ್ಮುಖದಲ್ಲಿ 'ಲಿಂಗಾಯತ ಸಾಂಸ್ಕೃತಿ'ಗೆ ಪರಿವರ್ತನೆ ಆಗುವಾಗಲೂ ತುಂಬಾ ಎಚ್ಚರವಹಿಸಿದ ವ್ಯಕ್ತಿ. ಸಂಪೂರ್ಣವಾಗಿ ಲಿಂಗಾಯತ ಸಂಸ್ಕೃತಿಗೆ ಪರಿವರ್ತನೆ ಆಗದೆ ತನ್ನದೇಯಾದ ಪಾರಂಪರಿಕ ಸಂಸ್ಕೃತಿಯಲ್ಲಿ ಯಥಾವತ್ತಾಗಿ ಮುಂದುವರೆಯದೆ ಆ ಸಂದರ್ಭಕ್ಕೆ ತಕ್ಕಂತೆ ತನ್ನದೇಯಾದ ಸಂಸ್ಕೃತಿಯನ್ನು ಸೃಷ್ಟಿಸಿಕೊಳ್ಳುವುದರ ಮುಖಾಂತರ

ತಮ್ಮ ಪಾರಂಪರಿಕ ಸಂಸ್ಕೃತಿಯನ್ನು ಕಾಪಾಡಿಕೊಂಡ ವ್ಯಕ್ತಿ. ಹಾಗಾಗಿ ಈತನನ್ನು ಕುರುಬ ಸಂಸ್ಕೃತಿಯ ಸಂರಕ್ಷಕನೆಂದು ಕರೆಯಲಾಗುತ್ತದೆ. ಲಿಂಗಾಯತ ಸಂಸ್ಕೃತಿಗೆ ಹಾಲುಮತ ಸಂಸ್ಕೃತಿಯನ್ನು ಸಂಸ್ಕೃತೀಕರಣ ಗೊಳಿಸಿದರೂ ಆ ಸಂಸ್ಕೃತೀಕರಣಗೊಳಿಸುವ ವಿಶಿಷ್ಟತೆಯಲ್ಲಿಯೇ ತನ್ನ ಸಂಸ್ಕೃತಿಯ ಅನನ್ಯತೆಯನ್ನು ಉಳಿಸಿಕೊಳ್ಳುವುದಕ್ಕೆ ಹೋರಾಟ ಮಾಡಿದ ಮತ್ತು ಉಳಿಸಿಕೊಂಡ ವ್ಯಕ್ತಿ ಈತ. ಹಾಗಾಗಿ ಹಾಲುಮತ ಸಂಸ್ಕೃತಿಯಲ್ಲಿ ಕಾಣಿಸಿಕೊಳ್ಳುವ ಗುರುಪರಂಪರೆಯಲ್ಲಿ ಈತ ವಿಶಿಷ್ಟವಾಗಿ ನಿಲ್ಲುತ್ತಾನೆ. ಈತನ ಬಗ್ಗೆ ಪ್ರತ್ಯೇಕ ಅಧ್ಯಯನಗಳಾಗಿರುವುದು ಕಡಿಮೆ. ಮೊದಲ ಬಾರಿಗೆ ಇಲ್ಲಿ ಸಮಗ್ರವಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಹೀಗೆ ಕೈಗೊಂಡ ಅಧ್ಯಯನದ ಮೂಲಕ ಕಂಡುಕೊಂಡ ಕೆಲವು ಫಲಿತಗಳು ಈ ಕೆಳಗಿನಂತಿವೆ.

**ಅಧ್ಯಯನದ ಕೆಲವು ಫಲಿತಗಳು**

**೧. ರಾಜಾಶ್ರಯದ ಬೆಂಬಲದಲ್ಲಿ ವಿಸ್ತರಣೆ ಆದ ಗುರುವರ್ಗವಿದು**

ಶಾಂತ ಒಡೆಯ ಸಂಪ್ರದಾಯವು ಸರೂರು ಗ್ರಾಮವನ್ನು ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳಲ್ಲಿ ವಿಸ್ತರಣೆ ಆಗಿದೆ. ಇದರಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ವಿಸ್ತರಣೆ ಆಗಿದೆ. ಇದಕ್ಕೆ ಪ್ರಮುಖ ಕಾರಣ ವಿಜಯನಗರದ ಅರಸರು ಮತ್ತು ಆನಂತರ ಕಾಣಿಸಿಕೊಂಡ ಪಾಳೆಗಾರ ಮನೆತನಗಳ ಪ್ರಾದೇಶಿಕ ಬೆಂಬಲವೂ ಆಗಿದೆ. ಬಳ್ಳಾರಿ, ಪೆನಗೊಂಡ, ಹುನಗುಂದ ಮುಂತಾದ ಪ್ರದೇಶಗಳಲ್ಲಿ ಪಾಳೆಗಾರಿಕೆ ಮಾಡಿದ ಮನೆತನಗಳು 'ಕುರುಬ' ಮನೆತನಗಳು ಅನ್ನುವ ಅಭಿಪ್ರಾಯಗಳು ಕೇಳಿಬರುತ್ತಿವೆ. ಮಹಾರಾಷ್ಟ್ರದಲ್ಲಿ ಅಥವಾ ಮಹಾರಾಷ್ಟ್ರದ ಪ್ರದೇಶದಲ್ಲಿ 'ಅಮೋಘಸಿದ್ಧ ಗುರುವರ್ಗ' ಹೆಚ್ಚು ಪ್ರಚಲಿತದಲ್ಲಿದ್ದ ಕಾರಣಕ್ಕೆ ಈ ಗುರುವರ್ಗ ಹೆಚ್ಚು ವಿಸ್ತರಣೆ ಆಗದೇ ಇರುವುದಕ್ಕೆ ಕಾರಣವಾಗಿರಬಹುದು. ಇರುವ ಮೂರು ಗುರುವರ್ಗಗಳಲ್ಲಿ ರೇವಣಸಿದ್ಧ ಅಥವಾ ಶಾಂತ ಒಡೆಯರ ಗುರುವರ್ಗ ಹೆಚ್ಚು ಜನಪ್ರಿಯ ಆಗಿದೆ. ಇದಕ್ಕೆ ಪ್ರಮುಖ ಕಾರಣ ಹಿಂದೆ ಹೇಳಿದಂತೆ ಈ ವರ್ಗಕ್ಕೆ ಸಿಕ್ಕ ಬೆಂಬಲ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಸಂಗಮ ವಂಶಸ್ಥವು ಹೆಚ್ಚು ರಾಜ ಬೆಂಬಲವನ್ನು ಕೊಟ್ಟಿತು. ಅವರ ಕಾಲಘಟ್ಟದಲ್ಲಿ ಹಲವು ಕುರುಬ ಮತ್ತು ಶೈವ ದೈವಗಳು ಸ್ಥಾಪನೆ ಆದವು. ಉದಾಹರಣೆ:- ವಿರೂಪಾಕ್ಷೇಶ್ವರ (ಬೀರಪ್ಪ). ವಿಜಯ ವಿಠಲ (ಇಟ್ಟಪ್ಪ), ಉಗ್ರ ನರಸಿಂಹ ಮುಂತಾದ ದೈವಗಳ ದೇವಾಲಯಗಳು. ಜೊತೆಗೆ ಈ ಮನೆತನದವರು ರೇವಣಸಿದ್ಧನನ್ನು ಕುಲದೈವವನ್ನಾಗಿ ಮಾಡಿಕೊಂಡು ಆರಾಧನೆ ಮಾಡುತ್ತಿದ್ದರು. ರೇವಣಸಿದ್ಧ ಮಠಗಳ ವಿಸ್ತರಣೆ ಮಾಡಿದರು. ಚಳ್ಳಕೆರೆ ತಾಲೂಕು ದೊಡ್ಡೇರಿ, ಶಿರಾ, ಚಿತ್ರದುರ್ಗ ತಾಲೂಕು ಸೊಲ್ಲಾಪುರ, ಹೊಸದುರ್ಗ ತಾಲೂಕು ಬಾಗೂರು ಮುಂತಾದ ರೇವಣಸಿದ್ಧ ಮಠಗಳು ವಿಜಯನಗರದ ಕಾಲದಲ್ಲಿ ಸ್ಥಾಪನೆಯಾದವು. ನಾವು ಹಂಪೆಯಿಂದ ವಲಸೆ ಬಂದವರೆಂದು ಇವರು ಹೇಳುತ್ತಾರೆ. ವಿಜಯನಗರ ರಾಜಾಡಳಿತಕ್ಕೆ ಸಂಬಂಧಿಸಿದ ಹಕ್ಕುಪತ್ರಗಳು ಮಠಗಳಲ್ಲಿವೆ. ಹಾಗಾಗಿ ಶಾಂತ ಒಡೆಯರ ಸಂಸ್ಕೃತಿ ರಾಜಾಶ್ರಯದಲ್ಲಿ ವ್ಯವಸ್ಥಿತವಾಗಿ ವಿಸ್ತರಣೆ ಆಗಿ ಜನಪ್ರಿಯತೆಯನ್ನು ಪಡೆಯಿತು ಎನ್ನಬಹುದು.

೨. ಕುರುಬ ಸಂಸ್ಕೃತಿಯ ಸಂಸ್ಕೃತೀಕರಣ

'ಹೊಲಸು ಸಂಸ್ಕೃತಿ'ಯವರು ಎನ್ನುವ ಕಾರಣಕ್ಕೆ ಕುರುಬರನ್ನು ಕಲ್ಯಾಣದಿಂದ ಬಹಿಷ್ಕರಿಸಲಾಗುತ್ತದೆ. ಈ ಬಹಿಷ್ಕಾರವನ್ನು ಮರಳಿ ಪಡೆಯುವಂತೆ ಶಾಂತಮುತ್ತಯ್ಯ ಹೋರಾಟ ಮಾಡುತ್ತಾನೆ. ಈ ಹೋರಾಟವು ಪ್ರಭುತ್ವವು ಆರೋಪಿಸಿದ ವಿರುದ್ಧ ಮಾಡಿದ ಹೋರಾಟದಂತಿದೆ. ಇದರ ಹಿಂದಿನ ಉದ್ದೇಶ ತನ್ನ ಪಾರಂಪರಿಕ ಸಂಸ್ಕೃತಿಯನ್ನು ಬಳಿಸಿಕೊಳ್ಳಬೇಕು ಅನ್ನುವುದಾಗಿತ್ತು. ಈ ರೀತಿಯ ಸಮುದಾಯ ಕಾಳಜಿಯಿಂದಲೇ ಹಲವು ಮುಂಚೂಣಿಯಲ್ಲಿದ್ದ ಕುಲನಾಯಕರನ್ನು ತನ್ನ ಹತ್ತಿರ ಆಕರ್ಷಿತನಾಗುತ್ತಾನೆ. ಇಡೀ ಸಮುದಾಯವೇ ಈತನ ಹೋರಾಟಕ್ಕೆ ಬೆಂಗಾವಲಾಗಿ ನಿಲ್ಲುತ್ತದೆ. ತೂಗುಡ್ಡ ಸುತ್ತ ಕುರುಬರು ನೆಲೆಸಿದ್ದರು. ಆಹಾರ ಸಾಮಗ್ರಿಗಳನ್ನು ಹೊತ್ತು ಸುತ್ತಮುತ್ತಲಿನ ಕುರುಬರು ಇಲ್ಲಿ ಬರುತ್ತಿದ್ದರು ಅನ್ನುವ ಕಥನಗಳು ಇದಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ರೇವಣಸಿದ್ಧ, ಸಿದ್ಧರಾಮ ಮುಂತಾದ ನಾಯಕರು ಶಾಂತಮುತ್ತಯ್ಯನ ಹೋರಾಟಕ್ಕೆ ಕೈಜೋಡಿಸುತ್ತಾರೆ. ಕಲ್ಯಾಣದಲ್ಲಿ ತನ್ನ ಸಂಸ್ಕೃತಿ 'ಸುಸಂಸ್ಕೃತಿ' ಅಥವಾ 'ಮಾನವ ಸಹಜ ಸಂಸ್ಕೃತಿ' ಎಂದು ಗೊತ್ತುಪಡಿಸುತ್ತಾನೆ. ಈ ಕಾರ್ಯದಲ್ಲಿ ಯಶಸ್ವಿಯಾದ ನಂತರ ನಡೆಯುವ ಕಾರ್ಯ ಗಮನ ಸೆಳೆಯುತ್ತದೆ. ಆತನ ಸಂಸ್ಕೃತಿಯಲ್ಲಿ ಅನೇಕ ಬದಲಾವಣೆಗಳು ಆಗುತ್ತವೆ. ರೇವಣಸಿದ್ಧ ಬಸವಣ್ಣನ ಸಮ್ಮುಖದಲ್ಲಿ ಲಿಂಗಾಯತ ಸಂಸ್ಕೃತಿಗೆ ಸಂಸ್ಕೃತೀಕರಣಗೊಳ್ಳುತ್ತಾರೆ. ಇದಕ್ಕೆ ಕಾರಣವಾದ ಪ್ರಮುಖ ಶಕ್ತಿ ರೇವಣಸಿದ್ಧ. ಈತ 'ಲಿಂಗದೀಕ್ಷೆ' ನೀಡಿ 'ಕುರುಬ ಕುಲಕ್ಕೆ ಗುರು' ಆಗು ಎಂದು ಹಾರೈಸಿ ಕಳಿಸುತ್ತಾನೆ. ಇದು ಶಾಂತಮುತ್ತಯ್ಯ ಹೋರಾಟ ಆರಂಭಿಸಿದ ದಿಕ್ಕಿಗೆ ವಿರುದ್ಧವಾದದ್ದು. ಸಂಸ್ಕೃತೀಕರಣಗೊಂಡು ಸರೂರಿಗೆ ಮರಳುತ್ತಾನೆ. ಈ ಕ್ರಿಯೆ ಪ್ರಮುಖವಾದದ್ದು. ಈ ಸಮುದಾಯದ ಮೇಲೆ ಇದ್ದ ಸಾಂಸ್ಕೃತಿಕ ಅಥವಾ ಜೀವನದ ಒತ್ತಡವನ್ನು ತಿಳಿಸುತ್ತದೆ. ಸಂಪೂರ್ಣವಾಗಿ ಲಿಂಗಾಯತ ಸಂಸ್ಕೃತಿಗೆ ಪರಿವರ್ತನೆ ಆಗದೆ ತನ್ನದೇಯಾದ ಪ್ರತಿಸಂಸ್ಕೃತಿಯನ್ನು ರೂಢಿಸಿಕೊಂಡರೂ ಆ ಸಂಸ್ಕೃತಿ ಲಿಂಗಾಯತ ಸಂಸ್ಕೃತಿಯಿಂದ ಪ್ರೇರಿತವಾದದ್ದು. ಕಾರಣ ಕುರುಬರನ್ನು ಲಿಂಗಾಯತ ಸಂಸ್ಕೃತಿಗೆ ಸಂಸ್ಕೃತೀಕರಣಗೊಳಿಸಿತು. ಕುರುಬರ ಪಾರಂಪರಿಕ ಚಹರೆಗಳು ವಿಸ್ಮೃತಿ ಆದವು. 'ವಿಭೂತಿ' ಮತ್ತು 'ಲಿಂಗಾರಾಧನೆ' ಪ್ರಧಾನಧಾರೆಗೆ ಬಂದಿತು. ಇದು ಅಲ್ಲದೆ ರೇವಣಸಿದ್ಧನನ್ನು ಕುಲದೈವವನ್ನಾಗಿ ಮಾಡಿಕೊಂಡ 'ಲಿಂಗಾಯತರು' ರೇವಣಸಿದ್ಧ ಮಠಗಳನ್ನು ಅಕ್ರಮಣ ಮಾಡಿಕೊಂಡು ತಮ್ಮ ಸಂಸ್ಕೃತಿಯನ್ನು ಪ್ರತಿಪಾದಿಸಿದರು. ಆ ವೇಳೆಗಾಗಲೆ ಆ ಮಠದ ಭಕ್ತರಾಗಿದ್ದ ಕುರುಬರು ಲಿಂಗಾಯತರಾಗುತ್ತಾ ಬಂದರು. ಹೀಗೆ ಹಲವು ವಿಧಗಳಲ್ಲಿ ಶಾಂತಮುತ್ತಯ್ಯನ ಸಂಸ್ಕೃತಿ, ಕುರುಬ ಸಂಸ್ಕೃತಿ ಸಂಸ್ಕೃತೀಕರಣಗೊಳ್ಳುತ್ತ ಬಂದಿತು.

೩. ಶಾಂತಮುತ್ತಯ್ಯ ತಾಂತ್ರಿಕ ಪಂಥದ ನಾಯಕ

ಕುರುಬರು ತಾಂತ್ರಿಕ ಪಂಥದವರು ಅನ್ನುವ ಉಲ್ಲೇಖಗಳು ಸಿಗುತ್ತವೆ. ಶಾಂತಮುತ್ತಯ್ಯ ಇದಕ್ಕೆ ಹೊರತಾಗಿಲ್ಲ. ಈತನಿಗೆ ಇದು ವಂಶಪಾರಂಪರಿಕವಾಗಿ ಬಂದ ಜ್ಞಾನವಾಗಿದೆ. ಈ ಶಾಂತಮುತ್ತಯ್ಯನ

ಪೂರ್ವಜರು ಸಿದ್ಧಿಪುರುಷರು. 'ನಾಥ', 'ಜೋಗಿ', 'ಭೈರವ' ಮುಂತಾದ ತಾಂತ್ರಿಕ ಪಂಥಗಳಲ್ಲಿ ಬೆಳೆದವರು. ಆದರೆ ಸಿದ್ಧಿಯತೆಗೆ ಹೆಚ್ಚು ಆದ್ಯತೆ ಕೊಟ್ಟವರು. ಶಿವನ ಆರಾಧಕರು. ಭೈರವ ರೂಪಿ ಶಿವನನ್ನು ಆರಾಧನೆ ಮಾಡುತ್ತ ಯೋಗ ಸಾಧನೆಯಿಂದ ಮಾಂತ್ರಿಕ ಶಕ್ತಿಯನ್ನು ಗಳಿಸಿಕೊಳ್ಳುತ್ತಿದ್ದರು ಎನ್ನುವ ಉಲ್ಲೇಖ ಜನಪದ ಹಾಲುಮತ ಮಹಾಕಾವ್ಯದಲ್ಲಿ ಬರುತ್ತವೆ. ಹಾಗಾಗಿ ಇವರನ್ನು ಜನರು ಸಿದ್ಧರೆಂದು ಕರೆಯುತ್ತಿದ್ದರು. ಅವರ ಮೂಲ ಹೆಸರುಗಳ ಹಿಂದೆ, ಜೊತೆಗೆ ಅಥವಾ ಪರ್ಯಾಯವಾಗಿ 'ಸಿದ್ಧ' ಅನ್ನುವ ಪದವನ್ನು ಬಳಸುವುದು ಇದಕ್ಕೆ ಸಾಕ್ಷಿ. ಉದಾಹರಣೆಗೆ:- ರೇವಣಸಿದ್ಧ, ಸಿದ್ಧರಾಮ, ಅಮೋಘಸಿದ್ಧ, ಸಿಡಿಯಾಣಸಿದ್ಧ (ಬೀರಪ್ಪ) ಮುಂತಾದ ಹೆಸರುಗಳನ್ನು ಕಾಣಬಹುದು. ಹೀಗೆ ಸಿದ್ಧಪರಂಪರೆಯಲ್ಲಿ ಬೆಳೆದ ಶಾಂತಮುತ್ತಯ್ಯ ಯೋಗ ಸಾಧನೆಯಿಂದ ತಾಂತ್ರಿಕ ಜ್ಞಾನವನ್ನು ಪಡೆದಿದ್ದ. ಈ ಕಾರ್ಯಸಾಧನೆಗಾಗಿ ಸರೂರನ್ನು ಆಯ್ಕೆ ಮಾಡಿಕೊಂಡಿರುವುದು ಕುತೂಹಲವನ್ನುಂಟು ಮಾಡುತ್ತದೆ. ಇದು ತುಂಬಾ ವಿಶಿಷ್ಟವಾದ ಸ್ಥಳವಿದು. ಸಿದ್ಧಿಸಾಧನೆಗೆ ಎಷ್ಟು ಮುಖ್ಯವಾದ ಸ್ಥಳವೊ ಅದು ಕುರಿಗಾರಿಕೆಗೂ ಅಷ್ಟೇ ಮುಖ್ಯವಾದ ಸ್ಥಳವಾಗಿದೆ. ಹೀಗೆ 'ವೃತ್ತಿ' ಮತ್ತು 'ಸಿದ್ಧಿ'ಯತೆಯನ್ನು ಸಮಾನ ನೆಲೆಯಲ್ಲಿ ಕಾಪಾಡಿಕೊಂಡ ಶಾಂತಮುತ್ತಯ್ಯನ ಪಶುಪಾಲನ ಸಾಂಸ್ಕೃತಿಕ ನಾಯಕರಲ್ಲಿ ಭಿನ್ನವಾಗಿ ಕಾಣಿಸುತ್ತಾನೆ. ತನ್ನ ತಾಂತ್ರಿಕ ಜ್ಞಾನವನ್ನು ಸಮುದಾಯದ ಸಂಕಷ್ಟ ಪರಿಹಾರಕ್ಕೆ ಬಳಸಿಕೊಳ್ಳುವುದರ ಮುಖಾಂತರ ಕುರುಬರ ನಾಯಕನಾಗಿ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ಕಟ್ಟಿಕೊಂಡ ಅಸ್ತಿತ್ವವೂ ಇವತ್ತು ಕುರುಬ ಸಮುದಾಯದಲ್ಲಿ ಜೀವಂತವಾಗಿದೆ. ಈಗಲೂ ಈತನ ಹೆಸರಿನಲ್ಲಿ ಒಡೆಯರು ತಾಂತ್ರಿಕ ಪಂಥವನ್ನು ಅನುಸರಿಸುತ್ತಿದ್ದಾರೆ. ಶಾಂತ ಒಡೆಯರು ನಮಗೆ ಇದು ಪರಂಪರೆಯಿಂದ ಬಂದ ಜ್ಞಾನವೆಂದು ಹೇಳಿಕೊಳ್ಳುತ್ತಾರೆ. ಇವರ ಮನೆಯಲ್ಲಿ ಅಥವಾ ಮಠಗಳಲ್ಲಿ ಈ ಪಂಥಕ್ಕೆ ಸಂಬಂಧಿಸಿದ ಲಿಖಿತ ಆಧಾರಗಳು ಇಂದಿಗೂ ಸಿಗುತ್ತವೆ. ಹಾಗಾಗಿ ಶಾಂತ ಒಡೆಯರ ಸಂಸ್ಕೃತಿ ಅಥವಾ ಶಾಂತ ಒಡೆಯರು 'ತಾಂತ್ರಿಕ ಪಂಥ'ದವರು ಎನ್ನುವ ನಂಬಿಕೆ ಜನರಲ್ಲಿ ಜನಪ್ರಿಯಗೊಂಡಿದೆ.

ಹೀಗೆ ಒಟ್ಟಾರೆಯಾಗಿ ಫಲಿತಗಳನ್ನು ಪಟ್ಟಿ ಮಾಡುತ್ತ ಹೋದರೆ ಇವುಗಳ ಪಟ್ಟಿಯು ಬೆಳೆಯುತ್ತ ಹೋಗುತ್ತವೆ. ಹಾಗಾಗಿ ಕೆಲವು ಮುಖ್ಯ ಫಲಿತಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

• • •

# ಅನುಬಂಧಗಳು

೧. ಶಾಸನ ಪಠ್ಯಗಳು

೧.೧. ಶಿರವಾಳ ಶಾಸನ

೧.೨. ತುರುವೆಕೆರೆ ತಾಮ್ರಶಾಸನ-೧

೨. ಆಧಾರ ಗ್ರಂಥಗಳು

೩. ಛಾಯಾಚಿತ್ರಗಳು

## ೧. ಶಾಸನ ಪಠ್ಯಗಳು

### ೧.೧. ಶಿರವಾಳ ಶಾಸನ

ಶಾಸನದ ಕೊನೆಯಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ವೀರಸೋಮೇಶ್ವರ ದೇವನನ್ನು ಉಲ್ಲೇಖಿಸುವುದರಿಂದ ಕ್ರಿ.ಶ. ೧೧೭೦ರ ಸುಮಾರಿಗೆ ಶಾಸನ ರಚನೆಗೊಂಡಿದೆಯೆಂದು ಅಂದಾಜಿಸಬಹುದಾಗಿದೆ. ಲಭ್ಯವಿರುವ ಶಾಸನದ ಪಾಠ ಇಂತಿದೆ -

೧. x x x x x x x x x x x x x x x x x x x x x x x x x

೨. x x x x ಸೆಟ್ಟಿಯುಂ ಕೆಂಬಾವಿಯ ಜೋಗಿಸೆಟ್ಟಿಯುಂ ಸಮಸ್ತ x x x x x x x x x x x x x x x

೩. x x x x ಕಂನಡ ನಾಲ್ಸಾಸಿರಮುಂ ನೆರದು ತಂಮೊಳೇಕಸ್ತರಾಗಿರ್ದ್ದು ◎ ಸ್ವಸ್ತಿ ಶ್ರೀಮತು ಸರ್ಬ್ಬಜೀವ x x x x

೪. x x x x x x ಗಳ ಪುತ್ರಂ ಸ್ವಸ್ತಿ ಶ್ರೀಮದಣಿಮಾದ್ಯಷ್ಟಗುಣ ಸಂಪಂನರುಂ ತತ್ವಜ್ಞಾನ ಪ್ರಸಂನರುಂ ದೀನಾನಾಥ x x x x

೫. x x x x ರು ಅದರ ಸಮಯಭಯಂಕರರುಂ ನಿಜಸಮಯಕಿಂಕರರುಮಪ್ಪ ಶ್ರೀಮತು ಸಿದ್ಧರೇವಣದೇವ

೬. x x x x ದೇವಕಾರ್ಯ್ಯಮಂ ನೋಡಿ ಸಾತೇಶ್ವರದೇವರ ಪೂಜೆ ಪುನಸ್ಕಾರ ನಂದಾದೀವಿಗೆ ನಡವಂತಾಗಿ ಐನೂರ್ಬ್ಬರುಂ ಸದ್ಭಕ್ತಿಯಿಂ ಕೂರ್ತ್ತು ದೇವರಿಗೆ ಎತ್ತು

೭. x x x x ಚೈತ್ರವೊಳಗಾಗಿ ಅಱುವತ್ತೆತ್ತಿನ ನೆಱವೊಕ್ಕಲೊಂದಕ್ಕಂ ಹೇಱಿದಡೆ ಸುಂಕವಿಲ್ಲ ಇಱಿದಡೆ ದಂಡವಿಲ್ಲ ಅಳದಾಡಯವಿಲ್ಲ

೮. x x x x ಯಾಯದಾಯ ಕಿಱುಕುಳ ಬೀರವಣ ಒಕ್ಕಲುದೆಱೆ ಇನಿತುಮಂ ಸರ್ಬ್ಬ ಮಾನ್ಯವಾಗಿ ಬಿಟ್ಟರು ಆದಿತ್ಯನ ಕಿರಣ ಉಪ್ಪು ಸಂಚೆ ಹುಲ್ಲ

೯. x x x x ರ ಈ ಧರ್ಮ್ಮಕ್ಕಾವನಡ್ಡ ಬಂದಡಂ ಸಮಯದ್ರೋಹನು ಚಕ್ರವರ್ತ್ತಿಯಾಣೆ ಐನೂರ್ಬ್ಬರಾಣೆ ಮೀಱಿದ

೧೦. x x x x x ನರು ◎ ಮತ್ತಂ ದೋರನಹಳ್ಳಿಯ ತೋರಣದಲಿಪ್ಪ ಮಹಾನಾಡುಗಳು ಮೂವತ್ತಾಱು ಬೀಡು ಮುಂಮುರಿದಂಡ ಉಭಯ

೧೧. x x x ವಾಡಿ ಗೊಬ್ಬೂರ ಸ್ಥಳದ ಗೋಣ್ಣಿಸೆಟ್ಟಿಯರುಂ ಚೀಲಿಸೆಟ್ಟಿಯ ದೇವಣಸೆಟ್ಟಿಯರುಂ ಮಾಗನೂರ

೧೨. x x x ಸೆಟ್ಟಿ ಬೆನಕಿಸೆಟ್ಟಿಯರುಂ ಮೊಸಳಿಕಲ್ಲ ಮಿಂಡಗುದ್ದಲಿ ದಾಸಿಸೆಟ್ಟಿಯರುಂ ಸಿರಿವೊಳ -

೧೩. x x x ಡವೊಂಬಮ ಸದ್ಭಕ್ತಿಯಿಂ ಕೂರ್ತ್ತು ದೇವರಿಗೆ ಎತು ಕತ್ತೆ ಕೋಣ ಬಂಡಿ ಚೈತ್ರವೊಳಗಾಗಿ ಅಱುವತ್ತೆ -

೧೪. x x x x ಗೆ ಸುಂಕವಿಲ್ಲ ಅಳದಡಾಯವಿಲ್ಲ ಗ್ರಾಸ ಕಾಣಿಕೆ ಸಮಸ್ತಾಯವೆಲ್ಲವಂ ಸರ್ಬ್ಬಮಾನ್ಯವಾಗಿ ಆದಿತ್ಯನ ಕಿ -

೧೫. x x x x ಲವರುಂ ಬಿಟ್ಟರು ಈ ಧರ್ಮ್ಮಕ್ಕಾವನಡ್ಡ ಬಂದಡಂ ನಾಡಿಂಗಂ ಚಕ್ರವರ್ತ್ತಿ ಗವೂರ ಹೇಳ್ವಾಳ ಕಯ್ಯಲು ಸಾ

೧೬. x x x x x ತ ಪಂಚಶತವೀರ ಶಾಸನ ಲಬ್ಧಾನೇಕ ಗುಣಗಣಾಳಂಕೃತ ವೀರ ಲಕ್ಷ್ಮೀನಿವಾಸ ವಕ್ಷಸ್ಥಳ

೧೭. x x x x x x ತಂ ಬಾಲಸ್ತ್ರೀ ಬ್ರಾಹ್ಮಣಯಿತ್ಯನಾದಾಕ್ರೋಶ ಪರಿರಕ್ಷರುಮಪ್ಪ ಶ್ರೀಮದಯ್ಯಾ-

೧೮. x x x x x x ಮುಂ ನಾಡಪ್ರಭು ಸಮಯ ಚಕ್ರವರ್ತ್ತಿ ಕಲಿ ದೇವಯ್ಯಸೆಟ್ಟಿಯರುಂ

೧೯. x x x x x x x x x x x ಸಾಸಿರಮುಂ ಕೊಂಡಿ ಮೂಱುಸಾಸಿರಮುಂ ಬೆಳುವಲ ಹುಲಿಗೆಱೆ ಎರಡಱುನೂಱು

೨೦. x x x x x x x x x x x x x ರಾಗಿರ್ದ್ದು ಸಂದತಿ ಸಿರಿವೊಳ ಸಾತೇಶ್ವರದೇವರ ದಶಕಾರ್ಯ್ಯಕ್ಕೆ ಮೆಚ್ಚಿ ಕೊಟ್ಟ ಎಲೆ

೨೧. x x x x x x x x x x x x x x x ಲು ಕೋಡೆಬಳ್ಳಿ ಬಾಳೆಕುಳಿಯ ಸುಂಕವಂ ರಾಯಹಡಪ ಸ

೨೨. x x x x x x x x x x x x x x x ಬೀರವಣ ಸೆಟ್ಟಿಗಳು ಸೌಧರೆಗಟ್ಟು ಮಿಂಡಗುದ್ದಲಿಗಟ್ಟು ಮಾಱಿದಡೆ

೨೩. x x x x x x x x x x x x x x x x x ಸಮಸ್ತ ಪನ್ನಾಯವೆಲ್ಲವಂ ಪರಿಹಾರವಾಗಿ ಉಪ್ಪು ಸ-

೨೪. x x x x x x x x x x x x x x x x x x ಹಾರಕ್ಕವನಡ್ಡ ಬಂದಡಂ ಗಲಕಿಗಂ ಬಣಂಜಿಗರುಳಾತನಾ

೨೫. x x x x x x x x x x x x x x x x x x x ಗವಿದಿರು ಈ ಶಾಸನಮಂ ರಕ್ಷಿಸಿದವಗೆ ಗಂಗೆ ಗಯೆ

೨೬. x x x x x x x x x x x x x x x x x x x x x ವಕತರಂ ಬಂದಾತನಾ ತೀರ್ತ್ಥಂಗಳೊಳು ಸಹಸ್ರ ಕವಿಲೆಯಂ

೨೭. x x x x x x x x x x x x x x x x x x x ಚಕ್ರವರ್ತ್ತಿ ತ್ರಿಭುವನಮಲ್ಲ ವೀರಸೋಮೇಶ್ವರ ವ -

೨೮. x x x x x x x x x x x x x x x x x x x x ಮಣ ನಿಮಿತ್ತವಾಗಿ ತಿಂತಿಣಿ ಸಿರಿವೂರಂ ತಾ

೨೯. x x x x x x x x x x x x x x x x x x x x x x ಮುರಿದಂಡಂಗಳುಂ ಉಭಯ ನಾನಾದೇ ಸಿಯುಂ*

---

* ಮುಂದೆ ಮೂಲೆಯಲ್ಲಿ ಏಳು ತ್ರುಟಿತ ಸಾಲುಗಳಿವೆ. ಶಾಸನದ ಮೇಲ್ಭಾಗ, ಬಲಭಾಗ, ಕೆಳಭಾಗಗಳು ಒಡೆದಿವೆ.

* ಅನುಶಾಸನ, ಸಂಪುಟ ೧, ಸಂಪಾದಕರು ಹನುಮಾಕ್ಷಿ ಗೋಗಿ, ಪುಟ ೩೪೨-೩೪೪.

## ೧.೨. ತುರುವೆಕೆರೆ ತಾಮ್ರ ಶಾಸನ - ೧

ಪತ್ರ-೧

ಮುಂಭಾಗ

೧. ಶುಭಮಸ್ತು । ನಮಂಸ್ತುಂಗ ಶಿರಚ್ಚುಂಬಿ ಚಂದ್ರಚಾಮರಚಾರವೇ । ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾ

೨. ಯ ಶಂಭುವೇ। ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೪೮೦ನೆಯ ಆನಂದಸಂವತ್ಸರದ ಮಾರ್ಗ

೩. ಶಿರ ಬ । ೭ಲು । ನ್ಯಯವಾಡಿದ ವಿವರಾ । ಶ್ರೀಮನ್ಮಂಡಲೇಶ್ವರ ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪರತಾಪ

೪. ಶ್ರೀ ವೀರಸದಸಿವ ಮಹಾರಾಯರು ಶ್ರೀಮನ್ಮಂಡಲೇಶ್ವರ । ಶ್ರೀರಾಮರಾಜೈಯದೇವರೂ ಮಹಾಅರಸುಗಳು ಸಮ್ಮುಖದಲ್ಲಿ ಶಾಂತಮುತ್ತೈ

೫. ಯ್ಯನವರಿಗೆ । ಗುರುತನದಯ್ಯ ಉಂಟೆಂದು । ಬಿಂನಹ ಮಾಡಲಾಗಿ ಆ ಅರಸುಗಳೂ । ಬಿನಂಹ ಕೇಳಿ ಯಿ

೬. ಅರಸುಗಳ ಮುದ್ರೆ ಮನುಷ್ಯರು ದಳವಾಯಿ ಜಂಗಮಯ್ಯನ ಮುದ್ರೆ ಮನುಷ್ಯರಾ । ತಳವರಾ ತಿರುಮಲೈಯನು

೭. ಶಾಂತಮುತ್ತೈಯನವರಿಗೆ । ಮಂಕನವರಿಗೆ । ನ್ಯಯವ ಕೇಳುವುದಕ್ಕೆ । ರಾಯರ ಹಜರದಲ್ಲಿ ಕುಳಿತು। ಸಧಚ

೮. ರದವರು । ವಪ್ಪದವರು । ದೊರೆಮಠದ ಶಾಂತದೇವರು । ವಂಟೆತ್ತಿನಮಠದ ವಿರೂಪಾಕ್ಷದೇವರೂ। ಪೂಜೆ

೧೦. ಸ್ತಳದ ಚಿಕವಿರಣವಡೆರು । ಯಲ್ಲಪಂಣನಮಠದ ಸಂಗನಬಸವರಾಜದೆವರ್‍ರು । ಪಟಸ್ರಾಂದಯೆಲೆ ಅಂಗ

೧೧. ಡಿಯ । ಮಠದ ಕುರುಡಸಂಗದೆವರು । ದಣಾಯಕರ ಅಂಗಡಿಯ ಮಠದ ಪರುಟಳದ ದೆವರು । ಬುಕ್ಕಸಾಗರದ

೧೨. ಮಠದ ಕರಿಸಿದ್ದೆದೇವರು। ಪಂಚಮಠಕ್ಕೆ ವಳಗಾದಂತಾ। ಹಿರಿಯರುಗಳು ಪುರ್‍ರಾಣದ। ನಮಶಿವಾಯದವ

೧೩. ರೂ ಪುರಾಣದ ತಂಮಪಂಣದೆವರು । ಪುರಾಣದ ಬವಾನಿದೆವರು । ಪುರಾಣದ

೧೪. ಚೌಉಲ್ಲಿದೆವರು। ಪಟಣದ ಗಣಾಚಾರಿ ರಾಚೈಯವಡೆರು। ಅರಕೆರೆಯ ಅಮೋಗಿ। ಮಲ್ಲಂಣವಡೆರು। ಅರಸುಗ

೧೫. ಳ ಕೆಲಸಿ ತಿಂಮೊಜನು । ಸಟಿಪಟಸ್ವಾಮಿಗಳು ವರದ ರಾಜೈಯಂ ಪುನ ಹೊರಪೆಟೆಯ ಸೆಟಿ ಪಟ್ಟಣ

೧೬. ಸ್ವಾಮಿಗಳು । ರಾಮಚಂದ್ರಪುರದಗೆ । ಬಿರುದನು ಸ್ವಾಮಿಗಳು । ತಿರುಮಲ ದೇವಿಪೆಟೆ ಸೆಟಿಪಟ್ಟಣ

ಹಿಂಭಾಗ

೧೭. ಸ್ವಾಮಿಗಳು ಕೃಷ್ಣಪುರದಸೆಟಿ ಪಟ್ಟಣಸ್ವಾಮಿಗಳು । ಮಲೆವಂತಪೆಟೆಯ ಸೆಟಿಪಟ್ಟಣ ಸ್ವಾಮಿಗಳು। ಸಣಕಿಪೆಟೆಸೆಟಿ ಪಟ್ಟಣ

೧೮. ಸ್ವಾಮಿಗಳು । ಅಚ್ಯುತಪುರದಪೆಟೆ ಸೆಟಿಪಟ್ಟಣಸ್ವಾಮಿಗಳು । ಯಿವರೆಲ್ಲರು ಸಹವಾಗಿ । ಸಮಸ್ತ ಸಭೆಗಳು ಸಮ

೧೯. ಸ್ತರ ಸದಚರದಲ್ಲಿ ಕುಳಿತು ಧರ್ಮಧರ್ಮದಲ್ಲಿ ನ್ಯಯವಾಗಿಸಿ ವಿವರ । ಉಬೆಯವಾದಿಗಳ ಮಥ ಕೇಳಿದ ವಿವರ ।

೨೦. ಮಂಕನವರು ಆಡಿದಮಾತು । ತಂಮ ಗುರು ಸೊಂನಲಾಪುರದ ಸಿಧರಾಮದೇವರು । ನಿಂಮ ಕುಲವವದುಯಂದು ಕೇಳಿದರೆ ।

೨೧. ಮಂಕನವರು ಆಡಿದಮಾತು । ಕೋಡುಗಲ್ಲಿನ ಮೇಲೆ । ಹಂನೆರಡು ಸೂಜಿನಿಲಿಸಿ । ಅದರ ಮೇಲೆ ಹಂನೆರಡು ಅಡಿಕೆ ನಿಲಿಸಿ

೨೨. ಆ ಸೂಜಿಯ ಬಟ್ಟಲ ಮೇಲೆ ತಪಸು ಮಾಡಿದೆಉ । ಮಂಕನವರಿಗೆ ಕುಲವಿಲ್ಲಯಂದು ಮಂಕನವರು ಆಡಿದ

೨೩. ಮಾತು । ಆಮೇಲೆ ಸಭೆಸಮಸ್ತರು ಶಾಂತಮುತ್ತೈಯನವರು ಕೇಳಿದ ಮಾತು । ನಿಂಮ ಗುರು ಆರುಯಂದು ಕೇಳಲಾಗಿ । ಶಾಂ

೨೪. ತಮುತ್ತೈಯನವರು ಆಡಿದ ಮಾತು । ನಂಮ ಗುರು ರೆವಣಸಿಧೆಶ್ವರ ದೆವರೂ ನಿಂಮ ಕುಲವಾವುದುಯಂದು ಕೇಳಲಾಗಿ । ತಂ

೨೫. ಮ ಕುಡಿವೊಕಲ ಮಕ್ಕಳು । ಯಂದು ಶಾಂತಮುತ್ತೈಯನವರ । ಆದಲಗಿ । ನಿಂಮ ಕುಲವೆಂತು ಕುಡಿವಕ್ಕಲಿಗರುವೆಂ

೨೬. ದಿರಿ ನಿಂಮ ಗುರು ರೆವಣಸಿಧೆಶ್ವರ ದೆವರು ಹೆಗಾದರು।ನಮಗೆ ಲ್ಲಿಂಗದೀಕ್ಷೆ। ಹೆಗೆ ಆಯಿತುಯಂದು ಕೆಳಲಾಗಿ ಶಾಂತ ಮುತ್ತೈ

೨೭. ಯ್ಯನವರು ಆಡಿದ ಮಾತು । ನಂಮ ಗುರು ರೇವಣಸಿಧೆಶ್ವರ ದೆವರು । ಕಂಚಿಪಟ್ಟಣದಿಂದ ಕಾವಿಕಾಶಾಂಬುದಿದ । ಕಲಕೆ

೨೮. ರೆಯಂಬ ಹಟ್ಟಿಗೆ ಬಂದರು । ನಾ ಉಟ್ಟಿದ ಕಂಬಳಿಯ ಕುಳಿರ ಹಾಕಿದೆವು । ಸ್ವಾಮಿಯಲ್ಲಿಂದ ಚಿತ್ತೈಯಸಿದಿರಿಯಂದು ಕೆಳ

೨೯. ಲಾಗಿ | ಕಾಂಚಿ ಪಟ್ಟಣದಿಂದ ಬಂದೆಉ ಯನಲಾಗಿ | ಯೆನು ನಿಮಿತ್ತವಾಗಿ ಬಂದಿರಿಯಂದು ಕೆಳಲಾಗಿ ಆ ರೆವಣಸಿಧೆಶ್ವರ ದೇವ

೩೦. ರು ಆಡಿದ ಮಾತು | ನೀನು ಚಂಬೆರಡು ಕಂಬಿಹಾಲ | ನಾಗರಿಗೆ ನಿದುತಯಿಧೆ | ನಿಉ ಹಾಲುಳವ ಮಗನೆಂದು ಹಾಲ ಸಲ್ಲಿಸೆ

೩೧. ಉಯಂದು | ಬಂದೆಪೆಯಂದು ಯನಲಾಗಿ | ಹಾಗೆಲೆಗಲ್ಲಿ | ಸಲಿಸಿಯಂದು | ಬಿಂನಹಂ ಮಾಡಿ ಮನೆಗೆ | ಬಂದೆಉ ಮನೆಗೆ ಬಂದ ಮ

೩೨. ಲೆವಾಲ ಸಲಿಸಿಯಂದು ಬಿಂನಹ ಮಾಡಲಾಗಿ | ನಿನಗೆ ಲಿಂಗಯಿಲ್ಲ | ನಾಉ ಲಿಂಗಾಂಗಿಯಲ್ಲದ ಬರಿಯ ಹಾಲ ಸಲಿಸಲಾಗದು

೩೩. ಯಂದು ಯಂನಲಾಗಿ | ಸ್ವಾಮಿ ಹಾಲ ಸಲಿಸಿದರೆ ಸಾಕು ಯಂನಲಾಗಿ ಹಾಗೆ ನಿಂಮ ಪಾದವ ಕರಣದಲ್ಲಿ ಲಿಂಗಧಾರಣೆ

೩೪. ಆದವುಯಂದು ಯಂನಲಾಗಿ | ನಂಮ ಸ್ತ್ರೀ ಪುರುಷರಿಗೆ ಲಿಂಗದೀಕ್ಷೆಕೊಡಿಯಂದು ಯಂನಲಾಗಿ

**ಪತ್ರ-೨**

**ಮುಂಭಾಗ**

೩೫. ಪಾದಪೂಜೆಗೆ | ಪುಷ್ಪವ ತಾ ಹೋಗುಯಂದು | ಯಂನಲಾಗಿ ಗಿಡಕೊಂದು ಪತ್ರೆಪುಷ್ಪ ತಂದೆನುಯಂದು ಯನಲಾಗಿ |

೩೬. ಯಿನ್ನೊಂದು ಪುಷ್ಪವ ತಂದಲ್ಲದೆ ವಪ್ಪನು | ಯೆಂದು ಯಂನಲಾಗಿ | ಯಿನ್ನೊಂದು ಪುಷ್ಪವಾವುದು ಯಂನಲಾಗಿ | ಕರಿಮಲ್ಲಿಗೆಯ ಪುಷ್ಪ

೩೭. ವ ತಂದಲ್ಲದೆ ವೊಪ್ಪೆನುಯೆಂದು ಯೆನಲಾಗಿ | ಕರಿಮಲ್ಲಿಗೆ ಪುಷ್ಪ ಆಗಬೇಕುಯೆಂದು ಯನಲಾಗಿ| ಯಿಂಡೆ ಶಾಂತ್ಯೆಯನು ರೆವಣಸಿ

೩೮. ದ್ದೇಸ್ವರ ದೇವರ ಪಾದಪೂಜೆ ತಡದಿಯೆಂದು | ಸಾಂತಯ್ಯನಗ ಸ್ವಾಮಿ ವಿಭೂತಿಯ ಧರಿಸಿದರೆ | ಸ್ವಾಮಿಪಾದ ವಿಡರು | ತಂದನು | ಯಂದು

೩೯. ಯನಲಾಗಿ | ಹೋಗುಯಂದು ವಿಭೂತಿಯ ಧರಿಸಿದರು | ಆ ವಾೂವ ಕರಿವುಲ್ಲಿಗೆಯ ಪುಷ್ಪವವಿಲ್ಲದೆ ರೆವಣಸಿದ್ದೇಸ್ವರ ದೇವರ ಪಾ

೪೦. ದ ಪೂಜೆ ತಡದಿದೆಯಂದು | ಯಿಂಡೆ ಶಾಂತ್ಯೆಯ ಕೊರಳಿಗೆ ಕಿಡ್ಡದನೊಲೆ ಕೊಂದು ಕೂಗಲಾಗಿ| ಆ ದೇವಲೋಕದಿಂದ ಕರಿಯ

೪೧. ಮಲ್ಲಿಗೆಯ ಪುಷ್ಪದ ಸರಸರಗಳು ಯಿಳಿಯಲಾಗಿ | ಆ ಪುಷ್ಪದಿಂದ ರೆವಣಸಿಧೆಸ್ವರದೇವರ ಪಾದಪೂಜೆಯಂ ಮಾ

೪೨. ಡಿ | ಸ್ವಾಮಿಯನು ಹಾಲಸಲಿಸಿಯಂದು ಬಿಂನಹವ ಮಾಡಿದರೆ | ಸರ್ವಗಣಗಳಲಿ ಸಲಿಸಿದೆಯನುತ ಅವರು | ಬಂದರು

೪೩. ಯಂದರು | ಯಂದು ಯನಲಾಗಿ | ಆ ಸಾಂತೈಯ್ಯನು ಬಿಂನಹ ಮಾಡಲಾಗಿ ನಂಮ ಸ್ರೀ ಪುರುಷರಿಗೆ ಯಿ ಬರಿ ಲಿಂಗದೀಕ್ಷೆ

೪೪. ಕೊಡರು | ಸ್ರೀಯಹ ದೆವಿಯ ಮಡಕೆಯಲಿ | ಕೊಡಪಾಲ ನಿಡಿಸಿಕೊಂಡು ಸಲಿಸಿದರು ಅಂದು ಮೊದಲು ನಂಮ ಗುರು

೪೫. ರೆವಣಸಿದೆಸ್ವರ ದೆವರು ಯಂದು ಶಾಂತಮುತ್ತೈಯ್ಯನವರು ಆಡಿದರು | ಆಡಲಾಗಿ ಸಭೆ ನಿವು ಕುರುಬರಿಗೆ ನಿವು ಗುರು

೪೬. ವಾದುದು ಹೇಗೆಯಂದು | ನಿಮಗೆ ಮುರುಹು | ಮುದ್ರೆ ಮೂರಡಿಯ ಕಂತೆ ಬಂದುದು ಹೆಗೆಯಂದು ಸಭೆ ಕೆಳಲಾಗಿ

೪೭. ಸಾಂತಮುತ್ತೈಯ್ಯನವರು ಆಡಿದ ಮಾತು | ಆ ಕಲ್ಯಾಣ ಪಟ್ಟದಲ್ಲಿ ಸತ್ತ ಕುರಿಯನು | ಹೆರ್ತ್ತ ಮೊಸರನು ಯರ

೪೮. ಕುರಿಯನು ಹೆರ್ತ್ತ ಮೊಸರನು | ಹೀಗೆ ಕುರುಬರು ಮಾರಬಹುದೆಯಂದು ಕುರುಬರೆಯಳು ಬೆಲಯಿಂದ್ರ ಹೊರಹಾಲಾಗಿ

೫೦. ಆ ಕುರುಬರು ಬಂದು | ನಮಗೆದುರಾಗಿ ನಂಮ ಕ[ಲ್ಯಾಣ] ಪಟ್ಟಣದೊಳಗೆ | ಕಿನ್ನರಿ ಬ್ರಹ್ಮಯ್ಯನವರ ಲಿಂಗ ಮುದ್ರೆಯ ತಗರು ಸಾಯಲಾಗಿ

೫೧. ಸತ್ತ ತಗರ ಕಲ್ಯಾಣಕೆ ಹಿಡಿಸಿಕೊಂಡು ಹೋಗಿ | ಪುಷ್ಪಕದಲ್ಲಿ ಕೊಂಡು ಹೋಗಿ ನಂಮ ಗುರು ರೆವಣಸಿಧೆಸ್ವರ ದೆವರು

೫೨. ಸ್ತುತಿಸಿ ಬಂದು ತೀರ್ಥ ಪ್ರಸಾದವನು ತಳಿದು | ಆ ಸತ್ತ ತಗರಿನ ಪ್ರಾಣವನು ಪಡೆವೆಲು ಆ ಕಲ್ಯಾಣದಲ್ಲಿ ಪುರದ ಬ

೫೩. ಸವಂಣನು | ಮಹಾಮಹಂತು ಸರಣರು ಮೆಚಿ ಮುರುಹ ಮುದ್ರೆ ಮೂರಡಿಯ ಕಂತೆಯನು ಕೊಟ್ಟು ಹೊರ ಹಾ

೫೪. ಕಿದ ಕುರುಬರನು ಕುಲವನು ವಳಿಯಕೆ ತೆಗೆದುಕೊಂಡು ಕುರಬರೆಲ್ಲರಿಗೂ ಗುರುವಾಗಿರಿಯಂದು

ಹಿಂಭಾಗ

೫೫. ಆ ಕುರುಬರಿಗೆ ವಿಭೂತಿ ಧರ್ರಿಸಿಕೊಂಡುಯಿರಿಯಂದರು | ಆ ಬಸಣವಂನು ಮಹಾಶರಣನು ಅರಭ್ಯ ಮೊದಲು ಕಂತೆ ಬಂ

೫೬. ದದು ಗುರುವಾದ ವಿವರ ಬುದಿಗ | ಯಂದು ಶಾಂತಮುತ್ತೈಯ್ಯನವರು ಆಡಿದರು ಮಹಾಮಹಂತು ಮಂಕನವರ ಕ

೫೭. ರದು | ನಿಮಗೆ ಮುರುಹು ಮುದ್ರೆ ಮೂರಡಿ ಕಂತೆ ಬಂದುದು ಹೀಗೆ | ಕುರುಬರಿಗೆ ಗುರುವಾದುದು ಹಿಗೆಯಂದು ಕೇಳಲಾಗಿ | ಮಂಕನವರು ಆ

೫೮. ಆಡಿದ ಮಾತು | ಕೊಡುಗಲ್ಲಿನ ಮೇಲೆ ಹಂನೆರಡು ಸೂಜಿನಿಲಿಸಿ | ಅದರ ಮೇಲೆ ಹಂನೆರಡು ಬಟ್ಟಲಿರಿಸಿ | ಆ ಸೂಜಿ ಬಟ್ಟಲ ಮೇಲೆ ಹಂನೆರಡು

೫೯. ವರುಷ ತಪಸ ಮಾಡಲಾಗಿ | ಈಶ್ವರನು ಮೆಚ್ಚಿ ಪ್ರಸಂನವಾಗಿ ನಮಗೆ ಮುರುಹ ಮುಂದ್ರೆ ಮೂರಡಿಯ ಕಂತೆಯನು ಕೊಟ್ಟು ಕುರ್ರುಬ

೬೦. ಗುಲಕೆ ಗುರುವಾಗಿರಿಯಂದು | ಮಂಕನವರು ಆಡಲಾಗಿ ಸಭೆ ಸಮಸ್ತರು | ನಿನು ಯಿಂಥಾ ಪ್ರಸಂಗ ಸ ಆ ಯುಗದಲ್ಲಿ ನಡಿದೆಯಂದು ಸಬೆ ಕೆಳಲಾ

೬೧. ಗಿ ಯಿ ಕಲಿಯುಗದಲ್ಲಿ ಯಿಂದ್ರ ಉಗ್ರ ತಪಸ ಆರು ಮಾಡಿದವರುಯಿಲ್ಲ | ಪೂರ್ವದಲ್ಲಿ ಬಸವ ಬಿಜ್ಜಣನ ಕಾಲದಲ್ಲಿ ತಪಸ ಮಾಡಿದೇಲು | ಎಂದು ಮಂಕ

೬೨. ನವರು ಆಡಲಾಗಿ | ಆ ಮಾತ ಕೆಳಿಸಿದಂತ ಹಿರಿಯರುಗಳು ಸಮಸ್ತ ಪ್ರಜೆಗಳು ಸರ್ವರೆಲ್ಲ ಕೇಳಿ| ಆಗಮಗಳ ನೋಡಿ ಯಿ ಕಲಿಯುಗದಲಿ

೬೩. ಯಿಂತಾ ಉಗ್ರ ತಪಸನಾರು ಮಾಡಿದವರುಯಿಲ್ಲ ಪೂರ್ವದಲ್ಲಿ | ಪಾರ್ವತಿದೇವಿಯರು | ಯಂದೆಂದುಗೂ ಜನನ ಮರಣವಿಲ್ಲದಂತಾ ಪುರುಷ

೬೪. ನಾಗಬೇಕೆಂದು ಪರಮೇಶ್ವರನ ಕುಕ್ಕುಟ ತಪಸ ಮಾಡಿದಳು | ಯಿ ಕಲಿಯುಗದಲ್ಲಿ ಹೀಗೆ ಆರು ತಪಸ ಮಾಡಿದವರುಯಿಲ್ಲ | ಮಂಕನವರ

೬೫. ಮಾತು ಬಿಳುಸೋಲವೆಂದು ಕಟಕಿಯ ಮಾಡಿದರು | ನಿಂನ ಗುರು ಸೊಂನಲಾಪುರದ ಸಿದ್ಧರಾಮದೆವರಿಗೆ ತಂದೆತಾಯಿ ಉಂಟು ಫಲ ಉಂ

೬೬. ಟು ನಿನಗೆ ತಂದೆತಾಯಿಯಿಲ್ಲ | ಕುಲವಿಲ್ಲ | ಯಿ ಯರಡು ಬಗೆಯಲ್ಲಿ ನಿಂನ ಮಾತು ಸೊಲಯಂದು ಸಭೆಯಂ ನಲಗಿ | ಮಂಕನವರು ಆ

೬೭. ಡಿದ ಮಾತು ತಂಮ ಕುಲ ಸೆನೆ ಕುಲವೆಂದು ಆಡಲಾಗಿ | ಸೆನೆ ಕುಲಯಂದರೆ ಹಾಲು ಕುಲವಾಯಿತ್ತು| ಮೊದಲು ಕುಲವಿಲ್ಲವೆಂದೆಗ ಯಂ

೬೮. ಗ ಕುಲವ ಹೇಳಿದೆ | ಯಿದರಿಂದ ಮರುಮಾತಿನಲು ನಿಂನ ಮಾತು ಸೊಲ | ನಿನಗೆ ಗುರುತನಕೆ ಕೆಲಸವಿಲ್ಲಯಂದು | ಸಭೆ ಯಂನಲಾಗಿ

೭೯. ಹಾಲಮತದ ಕುರುಬ ಕುಲಕೆ ಶಾಂತಮುತ್ತೈಯ್ಯನವರೆ ಗುರುಗಳು । ಮಂಕನಾದರೆ ಗುರುತನಕೆ ಕಾರಣವಿಲ್ಲ ಎಂದು । ಸಭೆಯಲು

೭೦. ಕೂಡಿ ಸಮಸ್ತರು ಮಠಮನೆಯ ಹಿರಿಯರುಗಳು ಮಹಾಮಹಾಂತು ಸಮಸ್ತರೆಲ್ಲರು । ಯಿ ಅರ್ಥಕೆ ವಂದು ವೊಲೆ ಬರಸಿ

೭೧. ಮುದ್ರೆ ಮನುಷ್ಯರ ಕೂಡೆ ಹೇಳಿ ಆ ವೊಲೆಯನು ಮುದ್ರೆಮನುಷ್ಯರ ಕೈಯ್ಯ ಕೊಡಲಾಗಿ। ಆ ಮುದ್ರೆ ಮನುಷ್ಯರು ತಳವರು ಜಂಗ

೭೨. ಮಯ್ಯನ ಮುಂದೆ ಯೆಕವಾಗಿ । ಆ ವೊಲೆ ವೊದಿಸಿಕೊಂಡು ತಿರುಮಲರಾಜೈಯ್ಯನವರ ಮುಂದೆ ಆ ಸಭೆ ಕಳುಹಿದ ವೊಲೆ

೭೩. ವೊದಿಸಿ ತೊರ್‍ಸಿ ಬಿಂನಹಂ ಮಾಡಿ । ಆ ತಿರುಮಲರಾಜೈಯ್ಯನವರು ರಾಮರಾಜೈಯ್ಯನವರು । ವೆಂಕಟಾದ್ರಿರಾಜೈಯನವರು

೭೪. ಯಿವರು ಅರಸುಗಳು ನ್ಯಾಯದಲ್ಲಿ। ಗೆದ್ದ ಶಾಂತಮುತ್ತೈಯ್ಯನವರಿಗೆ ವಿರೂಪಾಕ್ಷದೇವರ ಸೊಮವಾರದ ಬಾಗಿಲಲ್ಲಿ ಕುರುಬ

೭೫. ರೆಂಬ ಜಾತಿಗೆ ಮಂಕನವರಿಗೆ ಕಾರಣವಿಲ್ಲ। ಶಾಂತಮುತ್ತೈಯ್ಯನವರೆ ಗುರುಉಗಳೆಂದು। ಹೊಯಿಸಿಕೊಟ್ಟ ಸ್ತಿರಶಾಸನವು ಯಿದು

೭೬. ಅಲ್ಲಯೆಂದವರಿಗೆರವರವ ನರಕ ತಪ್ಪದು। ನ್ಯಾಯದಲಿ ಗೆದ್ದ ಶಾಂತಮುತ್ತೈಯ್ಯನವರಿಗೆ ಉಡುಗೊರೆಯ ಕೊಟ್ಟು ಕಳುಹಿಸಿದರು । ನ್ಯಾಯದ

೭೭. ಲಿ ಸೋತ ಮಂಕನವರ ಕಟ್ಟಿ ಸೆರೆ ಹಾಕಿ ಅಪರಾಜಿತಕೊಂಡಿರು । ಸೋತ ಕಟ್ಟಿ ಸೆರೆಯ ಬಿದ್ದ ಮಂಕನವರ ಹೆಸರು ಬೆಳಮಂಕ । ಪುರಾಣದ ಮಂಕ ।

೭೮. ಗಾಯದ ಮಂಕ । ಕಣ್ಣೂರ ಮಂಕ । ಬಿಳಿಚೆಡ ಮಂಕ । ಹೆಗ್ಗೆರೆ ಮಂಕ । ಕಿಜ್ಜು ಮಂಕ ।..... ಉ..... ಮಂಕ । ಅಸುಂಡಿ ಮಂಕ । ಅಂತು ೧೧

**ತಾಮ್ರಪತ್ರ-೩**

**ಮುಂಭಾಗ**

೭೯. ಅಂತು ಸೆರೆಗೆ ಬಿಧವರು । ಅಪರಾಧವ ತತ ಹಂನೊಂದು ಮಂದಿ ಮಂಕನವರು । ಯಿ ಮಂಕನ

೮೦. ವರ ಸೋಲಿಸಿ ಗುರುತನಕೆ ಕಾರಣವಿಲ್ಲಯೆನಿಸಿ ಕಟ ಸೆರೆಗೆ ಹಾಕಿಸಿದ । ಸಾಂತಮುತ್ತೈಯನವರ ಹೆ

೮೧. ಸರು ಸಿರ್ಪೆಯದೊಡತಮಿದೆ ವಡೆರು । ಕೊಳಲದ ತಮಿದೆ ವಡೆರು । ಹಿರಿಉರಸಿಯಪ್ರ

೮೨. ವಡೆರು ಕ। ಂದಿಕೆರೆ ಮಯಾದೊಸಿಧ ವಡೆರು । ರೆವಣ ವಡೆರು । ಅಗಳಿಗುರುವಪ ವಡೆರು

೮೩. ಬಸಪವಡೆರು |ನಂದಿಪ ವಡೆರು | ಬುಧವಡೆರು | ಕೊಟೂರ ನಗಿದವಡೆರು | ಕಂಚವಡೆರು ಯಿ

೮೪. ವರು ಸಾಂತಮುತ್ತೈಯ್ಯನವರು | ಹಾಲುಮತದ ಕುರುಬರೆಂಬ ಜಾತಿಗೆ ಸಾಂತಮುತ್ತೈಯನೊರೆ ಮು

೮೫. ತ್ತೈಯನವರೆ ಗುರುಗಳು | ಯಂದು ರಾಯರು ಸಿಂಹ್ವಾಸನಪತಿಗಳು | ಹೊಯಿಸಿಕೊಟ್ಟ ಸ್ತಿರ

೮೬. ಶಾಸನಾಉ | ಯಿದನು ಆಲ್ಲಯಂದವರಿಗೆ ರವರವ ನರಕ ತಪ್ಪದು | ಯಿಂತಿ ಸಾಸ

೮೭. ನದ ವಿವರಉ ಸಮಾಪ್ತ ಮಂಗಳ ಮಹಾಶ್ರೀಶ್ರೀಶ್ರೀ*

• • •

---

* ತಗರಪವಾಡ (ಸಂ), ಎಂ.ಎಂ. ಕಲಬುರ್ಗಿ, ಸಿ.ಕೆ., ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ, ಪು. ೯೯-೧೦೫.

# ೨. ಆಧಾರ ಗ್ರಂಥಗಳು


೧. ಅಡಿವೆಪ್ಪ ಒಡೆಯರು ಹಾಡಿದ ಮಾಳಿಂಗರಾಯನ ಕಾವ್ಯ, ಬುಡಕಟ್ಟು ಮಹಾಕಾವ್ಯ ಮಾಲೆ-೬ (ಸಂ), ಗಂಗಾಧರ ದೈವಜ್ಞ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೨. ಅನುಶಾಸನ (ಸಂಪುಟ ಒಂದು), ಶ್ರೀಮತಿ ಹನುಮಾಕ್ಷಿ ಗೋಗಿ, ಮಹಿಳಾ ಸಾಹಿತ್ಯಿಕ, ನವನಗರ, ಹುಬ್ಬಳ್ಳಿ, ೨೦೦೨.

೩. ಆಧುನಿಕ ಕುರುಬ ಸಮಾಜದ ಪ್ರಾತಃಸ್ಮರಣೀಯರು, ಲೇ: ಒಡೆಯರ್.ಡಿ. ಹೆಗ್ಗಡೆ, ಅಖಿಲಾ ಏಜೆನ್ಸೀಸ್, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಮೈಸೂರು ೫೭೦೦೨೪, ೨೦೦೫.

೪. ಇತಿಹಾಸ ದರ್ಶನ, ಸಂ. ೨೧, (ಸಂ): ಡಾ. ಎಂ.ಜಿ. ನಾಗರಾಜ, ಡಾ. ಪಿ.ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೬.

೫. ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ, ಡಾ. ವೀರೇಶ ಬಡಿಗೇರ, ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ, ಅಥಣಿ ಬೆಳಗಾಂವ, ೧೯೯೯.

೬. ಕಂಠಪತ್ರ-೨, ಡಾ. ಎಫ್.ಟಿ. ಹಳ್ಳಿಕೇರಿ, ವಿಕಾಸ ಪ್ರಕಾಶನ, ಶೋಧನ ಶಿಕ್ಷಕರ ಬಡಾವಣೆ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೪.

೭. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಿ.ಬಿ.ಕೆ., ಮೂರ್ತಿ, ಕೃಷ್ಣರಾಜಪುರಂ, ಮೈಸೂರು ೪, ನಾಲ್ಕನೆಯ ಮುದ್ರಣ, ೧೯೯೨.

೮. ಕರ್ನಾಟಕ ಕುರುಬರು, ಡಾ. ಶಿವಾನಂದ ಗುಬ್ಬಣ್ಣವರ, ಅಕ್ಷಯ ಪ್ರಕಾಶನ, ಧಾರವಾಡ ೧೯೯೩.

೧೦. ಕವಲು ದಾರಿಯಲ್ಲಿ ಕರ್ನಾಟಕ ಕುರುಬ ಜನಾಂಗ (ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ ಅಧ್ಯಯನ), ಪ್ರೊ. ಒಡೆಯರ್.ಡಿ. ಹೆಗ್ಗಡೆ, ಮಾನವಾಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು ೨೨, ೨೦೦೩.

೧೧. **ಕುರುಬರ ಗುರು ಒಡೆಯರು**, ಡಾ. ಎಫ್.ಟಿ. ಹಳ್ಳಿಕೇರಿ, ವಿಕಾಸ ಪ್ರಕಾಶನ, ಶೋಧನ, ಶಿಕ್ಷಕರ ಬಡಾವಣೆ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ ೫೮೩ ೨೦೧, ೨೦೦೭.

೧೨. **ಕುರುಬರ ಚರಿತ್ರೆ**, ವಿ.ಆರ್., ಹನುಮಂತಯ್ಯ, ಪ್ರತಿಭಾ ಪ್ರಕಾಶನ, ಎಚ್.ಐ.ಜಿ. ೨೨ಎ ಅಂಡ್ ಬಿ. ಬ್ಲಾಕ್, ಆಂದೋಲನ ವೃತ್ತ, ರಾಮಕೃಷ್ಣನಗರ, ಮೈಸೂರು ೨೩, ಪು. ೧೯೯೬.

೧೩. **ಕುರುಬ ಜನಪದ**, (ಸಂ), ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್.ಎಸ್. ವಾಡೇದ, ಕನಕ ಜಯಂತ್ಯೋತ್ಸವ ಸಮಿತಿ, ಸಿಂದಗಿ ಜಿ., ವಿಜಾಪುರ, ೧೯೯೭.

೧೪. **ಕುರುಬ ಜನಾಂಗದ ರಾಜವಂಶಗಳು**, ಲೇ: ಒಡೆಯರ್.ಡಿ. ಹೆಗ್ಗಡೆ, ಅಖಿಲಾ ಏಜೆನ್ಸೀಸ್, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಮೈಸೂರು ೫೭೦೦೨೪, ೨೦೦೫.

೧೫. **ಕುರುಬರ ಜನಾಂಗದ ಪ್ರಸಿದ್ಧ ಸಾಹಿತಿಗಳು ಮತ್ತು ಕಲಾವಿದರು**, ಲೇ: ಪ್ರೊ. ಒಡೆಯರ್ ಡಿ. ಹೆಗ್ಗಡೆ, ಅಖಿಲಾ ಏಜೆನ್ಸೀಸ್, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಮೈಸೂರು ೫೭೦೦೨೪, ೨೦೦೫.

೧೬. **ಕುರುಬರ ಹೆಜ್ಜೆಗಳು ಒಂದು ಅಧ್ಯಯನ**, ಚಂದ್ರಕಾಂತ ಬಿಜ್ಜರಗಿ, ಶೈಲಚಂದ್ರ ಪ್ರಕಾಶನ, ದರ್ಗಾ, ಕೇಂದ್ರ ಕಾರಾಗೃಹದ ಹತ್ತಿರ, ವಿಜಾಪುರ ೫೮೬೧೦೩, ೨೦೦೬.

೧೭. **ಗೊರವರ ಸಂಸ್ಕೃತಿ**, ಉಪಸಂಸ್ಕೃತಿ ಅಧ್ಯಯನ ಮಾಲೆ, ಡಾ. ಚಕ್ಕೆರೆ ಶಿವಶಂಕರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨, ೧೯೯೩.

೧೮. **ಜನಪ್ರಿಯ ಕನಕ ಸಂಪುಟ**, (ಸಂ), ದೇ. ಜವರೇಗೌಡ, ಎಲ್.ಎಸ್. ಶೇಷಗಿರಿರಾವ್, ದೇವೇಂದ್ರ ಕುಮಾರ ಹಕಾರಿ, ಎಚ್.ಜೆ. ಲಕ್ಕಪ್ಪಗೌಡ, ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೫೬೦೦೦೨, ತೃತೀಯ ಆವೃತ್ತಿ, ೧೯೯೧.

೧೯. **ಜನಪದ ಹಾಲುಮತ ಮಹಾಕಾವ್ಯ** (ಸಂ), ಡಾ. ವೀರಣ್ಣ ದಂಡೆ, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಕಾವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು ೫೬೦೦೧೮, ೨೦೦೦.

೨೦. **ಜಾನಪದ ಸಾಹಿತ್ಯ ದರ್ಶನ**, ಜಾನಪದ ಸಮ್ಮೇಳನ ಸ್ಮರಣೆ, ಸಂ. ೧ (ಸಂ), ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ೧೯೭೪.

೨೧. **ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ**, ಡಾ. ದೇವೇಂದ್ರ ಕುಮಾರ ಹಕಾರಿ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು ೧೮, ೧೯೮೫.

೨೨. **ಪಗರಣ ಮತ್ತು ಇತರ ಸಂಪ್ರಬಂಧಗಳು**, ಡಾ. ಎಂ. ಚಿದಾನಂದಮೂರ್ತಿ, ಪುಸ್ತಕ ಚಿಲುಮೆ, ೧೮೯೦, ರತನ್‌ಸಿಂಗ್ ಮೊದಲನೆ ಮುಖ್ಯ ರಸ್ತೆ, ಮಾಲತಿ ಮಹಲ್ಲಾ, ಮೈಸೂರು, ೨೧, ೧೯೮೪.

೨೩. **ಭಾರತದ ಕುರುಬರು : ರಾಜ ಪರಂಪರೆಯ ಬುಡಕಟ್ಟು, (ಸಮಾಜೋ ಸಾಂಸ್ಕೃತಿಕ ಅಧ್ಯಯನ)**, ಮೂಲ: ಡಾ. ಶ್ಯಾಂಸಿಂಗ್ ಶಶಿ, ಕನ್ನಡಕ್ಕೆ: ಬಿ.ಕೆ. ರವಿ, ಅಂಕಿತ ಪುಸ್ತಕ ಪ್ರಕಾಶನ, ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನ ಗುಡಿ, ಬೆಂಗಳೂರು ೫೬೦೦೦೪.

೨೪. **ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ ಧಾರವಾಡ ಜಿಲ್ಲೆ (ಪರಿಷ್ಕೃತ ಆವೃತ್ತಿ)**, ಮುಖ್ಯ ಸಂಪಾದಕರು, ಡಾ. ಸೂರ್ಯನಾಥ ಕಾಮತ್, ಮ. ಪರಿಶ್ರೀ ಪ್ರಿಂಟರ್ಸ್, ನಾಗಪ್ಪ ರಸ್ತೆ, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು ೫೬೦೦೦೩, ೧೯೯೫.

೨೫. **ಬೀರದೇವರ ಸಂಪ್ರದಾಯ ಮತ್ತು ಆಚರಣೆಗಳು**, ಲೇ: ದೊಡ್ಡಣ್ಣ ಗದ್ದನಕೇರಿ, ಕಮಲ ಪ್ರಕಾಶನ, ಚಿತ್ತವಾಡಗಿ, ತಾ. ಹುನಗುಂದ, ಜಿ. ಬಾಗಲಕೋಟೆ, ೨೦೦೩.

೨೬. **ಬೀರೇಶ್ವರ ಮಾಳಿಂಗರಾಯರ ಡೊಳ್ಳಿನ ಪದಗಳು** (ಸಂ), ಶಿವಲಿಂಗ ಅ. ಕುಂಬಾರ, ವಿದ್ಯಾನಿಧಿ ಪ್ರಕಾಸನ, ಗದಗ, ೨೦೦೬.

೨೮. **ಮಾರ್ಗ, ಸಂ.೪ (ಸಂಶೋಧನ ಪ್ರಬಂಧಗಳ ಸಂಕಲನ)**, ಡಾ. ಎಂ.ಎಂ. ಕಲಬುರ್ಗಿ, ಸ್ವಪ್ನಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು ೫೬೦೦೦೯, ೨೦೦೪.

೨೯. **ಮ್ಯಾಸಬೇಡರ ಕಥನಗಳು**, ಪ್ರಭಾಕರ್ ಎ.ಎಸ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೦. **ರಸ್ತಾಪುರ ಭೀಮಕವಿ ವಿರಚಿತ**, ಶ್ರೀ ರೇವಣಸಿದ್ಧೇಶ್ವರ ಲೀಲಾ, ಸಂಯುಕ್ತ ಹಾಲ್ಮತೋತ್ತೇಜಕ ಪುರಾಣವು (ಸಂ), ಭಾಗೂತನಯನವಿಲ್ಲ, ಶಶಿಕಲಾ ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೮೨.

೩೧. **ಲಿಂಗಾಯತ**, ಮಾಸಿಕ ಪತ್ರಿಕೆ-ಸಂಚಿಕೆ-೯ (ಸಂ), ಡಾ. ಎನ್.ಜಿ. ಮಹಾದೇವಪ್ಪ (ಲೇ), ಶಾಂತಲಿಂಗಾಯತ ಶರಣ ಲಿಂಗಾಯತ - ವೀರಶೈವ, ಡಾ. ಎಂ.ಎಂ. ಕಲಬುರ್ಗಿ, ನಾಗನೂರು ರುದ್ರಾಕ್ಷಿಮಠ, ಶಿವಬಸವ ನಗರ, ಬೆಳಗಾವ, ಡಿಸೆಂಬರ್, ೨೦೦೮.

೩೨. **ವಚನಕಾರ ಶಿವಯೋಗಿ ಸಿದ್ಧರಾಮ**, ಲೇ: ಒಡೆಯರ್ ಡಿ. ಹೆಗ್ಗಡೆ, 'ಅಂಜನಾದ್ರಿ', ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಚೇತನ ಬುಕ್‌ಹೌಸ್, ಮೈಸೂರು ೫೭೦೦೨೪.

೩೩. **ಶಾಂತಮುತ್ತಯ್ಯ ಮತ್ತು ಸಿದ್ಧರ ಪವಾಡಗಳು**, ಉಮೇಶ, ಹ ಹೊನ್ನೇರಿ, ಶ್ರೀ ಸಿದ್ದಯ್ಯ ಗುರುವಿನ ಹಾಲಮತ ಗುರು ಪೀಠಾಧಿಪತಿಗಳು, ಸರೂರು ಪೂಜಾ ಪ್ರಿಂಟರ್ಸ್, ಬಿಜಾಪುರ, ೨೦೦೮.

೩೪. **ಶಾಸನ ವ್ಯಾಸಂಗ (ಸಂಪುಟ ಎರಡು)**, ಡಾ. ಎಂ.ಎಂ. ಕಲಬುರ್ಗಿ, ಕನ್ನಡ ಅಧ್ಯಯನ ಪೀಠ, ಪಠ್ಯಪುಸ್ತಕ, ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೩, ೧೯೭೫.

೩೫. ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ. ೪೫೦, ಕ್ರಿ.ಶ. ೪೫೦, ಕ್ರಿ.ಶ. ೧೧೫೦, ಡಾ. ಎಂ. ಚಿದಾನಂದಮೂರ್ತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೩೬. ಶ್ರೀ ರೇವಣಸಿದ್ಧೇಶ್ವರ ಮತ್ತು ಬೀರೇಶ್ವರ, ಲೇ: ಪ್ರೊ. ಒಡೆಯರ್ ಡಿ. ಹೆಗ್ಗಡೆ, ಅಖಿಲಾ ಏಜನ್ಸೀಸ್, 'ಅಂಜನಾದ್ರಿ', ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು ೫೭೦೦೨೪, ೨೦೦೫.

೩೭. ಶ್ರೀ ಅಮೋಘಸಿದ್ಧೇಶ್ವರ ಚರಿತ್ರೆ, ಲೇ: ಚಂದ್ರಕಾಂತ ಪ್ರಭುದಾವ ಬಿರಾದಾರ, ಮಾಡ್ಯಾಳ, ತಾಲೂಕು ಆಳಂದ ಜಿಲ್ಲೆ ಕಲಬುರ್ಗಿ, ೧೯೮೨.

೩೮. ಸಿದ್ಧರಾಮ ಸಾಹಿತ್ಯ ಸಮೀಕ್ಷೆ ಐದು ಉಪನ್ಯಾಸಗಳು (ವಿಶೇಷ, ವಾಙ್ಮಯ ಪ್ರಸಾರ ಪುಸ್ತಕ ಮಾಲೆ ೧೦).

೩೯. ಸಿದ್ಧಮಂಕ ಚರಿತೆ (ಸಂ), ಡಾ. ಎಂ.ಎಂ. ಕಲಬುರ್ಗಿ, ಡಾ. ವೈ.ಸಿ. ಭಾನುಮತಿ, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೦೪.

೪೦. ಸಿದ್ಧ ಸಾಹಿತ್ಯ, ಮ.ಸು. ಕೃಷ್ಣಮೂರ್ತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೨.

೪೧. ಹಾಲಕೆನೆ, 'ಕುರುಬ ಜನಾಂಗದ ಸಾಂಸ್ಕೃತಿಕ ಅಧ್ಯಯನಗಳು' (ಸಂ), ಡಾ. ಶ್ರೀರಾಮ ಇಟ್ಟಣ್ಣವರ, ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ಬಿಜಾಪುರ, ೨೦೦೨.

೪೨. ಹಾಲುಮತ ಆರ್ಯ ಹೆಗ್ಗಡೆಗಳು, ಎಂ. ರಾಮಣ್ಣ ಹೆಗ್ಗಡೆ, ಇಂದಿರಾ ಚಂದಿರಾ ಪ್ರಕಾಶನ, ಮೈಸೂರು, ೧೯೯೦.

೪೩. ಹಾಲುಮತ ಕುರುಬ ಜನಾಂಗದ ಇತಿಹಾಸ, ಲೇ: ಒಡೆಯರ್.ಡಿ. ಹೆಗ್ಗಡೆ, ಅಖಿಲಾ ಏಜೆನ್ಸೀಸ್, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಮೈಸೂರು ೫೭೦೦೨೪, ೨೦೦೫.

೪೪. ಹಾಲುಮತದ ಚರಿತ್ರೆ (ಸಂ), ವೈ.ಕೆ. ಗುಂಡಕರ್ಜಗಿ, ವಿಜೇತ ಪ್ರಕಾಶನ, ಗದಗ, ೨೦೦೫.

೪೫. ಹಾಲುಮತ ಪುರಾಣ, ಲೇ: ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಸಾ., ಬಂಕಾಪೂರ ಜಿ., ಧಾರವಾಡ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೯.

೪೬. ಹಾಲುಮತ ಪುರಾಣಗಳ ಭಿನ್ನಾಭಿಪ್ರಾಯಗಳು (ಸಂ), ಶಂಕರ ಶಿವಲಿಂಗ ಕುಂಬಾರ, ಬಸವಯೋಗಾಶ್ರಮ ಕಬ್ಬೂರ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬.

೪೭. ಹಾಲುಮತದ ಪುರಾಣವು, ಶ್ರೀ ಚನ್ನಬಸವ ಕವಿಯ ಪ್ರಕಾಶಕರು, ದಾವಣಗೆರೆ ತಾಲೂಕು, ಚಿಕ್ಕಬುದಿಹಾಳು ಗ್ರಾಮದಲ್ಲಿರುವ ಶ್ರೀ ಮದಭಿನವ ರೇಣುಕ ಗುರುಕಲಾ ಶ್ರಮದ ಸದ್ಭಕ್ತರು, ೧೮೮೧.

೪೮. **ಹಾಲುಮತದ ಮೂಲ ಗುರು ರೇವಣಸಿದ್ಧರು (ಸಂ)**, ಶಂಕರ ಶಿವಲಿಂಗ ಕುಂಬಾರ, ಬಸವಯೋಗಾಶ್ರಮ ಕಬ್ಬೂರ, ತಾ. ಚಿಕ್ಕೋಡಿ. ಜಿ. ಬೆಳಗಾವಂ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬-೦೭.

೪೯. **ಹಾಲುಮತದ ಸಿದ್ಧರಾಮ (ಸಂ).**, ಶಂಕರ ಶಿವಲಿಂಗ ಕುಂಬಾರ, ಬಸವಯೋಗಾಶ್ರಮ ಕಬ್ಬೂರು, ತಾ. ಚಿಕ್ಕೋಡಿ, ಜಿ. ಬೆಳಗಾಂವ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬-೦೭.

೫೦. **ಹಾಲುಮತದ ಹುಟ್ಟು**, ಲೇ: ಬೋನಾ ಬಸವರಾಜ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೨.

೫೧. **ಹಾಲುಮತಸ್ಥರು**, ಲೇ: ಬಿ.ಪ. ನಾಯ್ಕರ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೩.

೫೨. **ಹೇಳಿಕಿ ಮಾಡ್ಯಾರ ಒಡೆಯರು (ಸಂ)**, ಡಾ. ಎಂ.ಎಂ. ಪಡಶೆಟ್ಟಿ, ನೆಲೆ ಪ್ರಕಾಶನ, ಸಿಂದಗಿ, ೧೯೯೩.

• • •



ಶಾಂತಮುತ್ತಯ್ಯನ ದೇವಾಲಯ – ಸಿರಿವಾಳ, ಶಾಹಪುರ ತಾ॥



ರೇವಣ ಸಿದ್ಧೇಶ್ವರ ಮೂರ್ತಿ–ಬಾಗೂರು, ತಾ. ಹೊಸದುರ್ಗ



ಸಿದ್ಧಲಿಂಗೇಶ್ವರ ದೇವಾಲಯ – ಶಿರವಾಳ, ಶಾಹಪುರ ತಾ॥



ಶಾಂತಮುತ್ತಯ್ಯನ ಗದ್ದುಗೆ – ಸರೂರು, ಮುದ್ದೇಬಿಹಾಳ್ ತಾ॥



ಒಡೆಯರ ಸಮಾಧಿಗಳು - ಸರೂರು, ಮುದ್ದೇಬಿಹಾಳ್ ತಾ॥



ರೇವಣಸಿದ್ಧೇಶ್ವರ ನವ ದೇವಾಲಯ - ಸರೂರು, ಮುದ್ದೇಬಿಹಾಳ್ ತಾ॥



ರೇವಣಸಿದ್ಧೇಶ್ವರ (ಏಳುಗುಡಿ) ದೇವಾಲಯ–ಸುರೂರು, ಮುದ್ದೇಬಿಹಾಳ್ ತಾ॥



ರೇವಣಸಿದ್ಧೇಶ್ವರ (ಏಳುಗುಡಿ) ದೇವಾಲಯದ ಸಪ್ತಕಳಸಗಳು – ಸರೂರು, ಮುದ್ದೇಬಿಹಾಳ್ ತಾ॥



ಸಿದ್ಧೇಶ್ವರ ದೇವಾಲಯದಲ್ಲಿರುವ ಶಾಸನ - ಸಿರವಾಳ, ಶಾಹಪುರ ತಾ॥



ಶಾಂತಮುತ್ತಯ್ಯ ಪವಾಡ ಮಾಡಿದನೆನ್ನುವ ಸ್ಥಳ, ಸರೂರ, ಮುದ್ದೇಬಿಹಾಳ-ತಾ

